- ಬ್ಲಾಕ್ ಮಟ್ಟದ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಪ್ರಾಧಿಕಾರಿಗಳಾದ ಕ್ಷೇತ್ರ ಶಿಕ್ಷಣಾಧಿಕಾರಿಗಳು ಕೌನ್ಸಿಲಿಂಗ್ ಮೂಲಕ ನೇಮಕಾತಿ ಆದೇಶ ನೀಡುತ್ತಾರೆ.

***20] ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ವಿವರಗಳು:***

***ಅ. ಪರೀಕ್ಷೆಯ ಹೆಸರು:*** ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿಯರ ಹುದ್ದೆಗಳ ನೇಮಕಾತಿಗೆ ನಡೆಸುವ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಪ್ರತಿಯೊಂದಿಗೆ ಅಭ್ಯರ್ಥಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾಗುವುದು ಕಡ್ಡಾಯವಾಗಿರುತ್ತದೆ.

***ಆ. ಪರೀಕ್ಷೆ ನಡೆಸುವ ಪ್ರಾಧಿಕಾರ:*** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯನ್ನು ಆಯ್ಕೆ ಪ್ರಾಧಿಕಾರ ಹಾಗೂ ಉಪನಿರ್ದೇಶಕರು [ಆಡಳಿತ], ಸಾರ್ವಜನಿಕ ಶಿಕ್ಷಣ ಇಲಾಖೆ, ಇವರು ತಮ್ಮ ಶೈಕ್ಷಣಿಕ ಜಿಲ್ಲೆಯ ವ್ಯಾಪ್ತಿಯಲ್ಲಿ ನಡೆಸುವರು.

ಇ. ಪರೀಕ್ಷೆ ನಡೆಸುವ ದಿನಾಂಕ:24.03.2013.

***ಈ. ಪರೀಕ್ಷಾ ಅವದಿ ಹಾಗೂ ಸಮಯ:*** ಬೆಳಿಗ್ಗೆ 10.30 ರಿಂದ ಮಧ್ಯಾಹ್ನ 12.00ಗಂಟೆ.

***ಉ. ಪ್ರಶ್ನೆ ಪತ್ರಿಕೆಯಲ್ಲಿನ ವಿಷಯ ಹಾಗೂ ಅಂಕಗಳು:*** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಕೆಳಕಂಡ ಐದು ವಿಷಯಗಳನ್ನೊಳಗೊಂಡ ಒಂದು ಪ್ರಶ್ನೆ ಪತ್ರಿಕೆಯನ್ನು ಹೊಂದಿರುವುದು. ಪ್ರತಿ ವಿಷಯದಲ್ಲಿ ಒಂದು ಅಂಕದ 30 ಪ್ರಶ್ನೆಗಳಿದ್ದು, ಐದು ವಿಷಯಗಳಿಗೆ ಒಟ್ಟು 150 ಅಂಕಗಳನ್ನು ನಿಗದಿಪಡಿಸಲಾಗಿದೆ. ಪ್ರಸ್ತುತ ನಡೆಯುತ್ತಿರುವ ಪರೀಕ್ಷೆ ಎನ್.ಸಿ.ಟಿ.ಇ., ನಿಗದಿ ಪಡಿಸಿರುವ ಶಿಕ್ಷಕರ ಅರ್ಹತಾ ಪರೀಕ್ಷೆ ಸ್ವರೂಪವನ್ನು ಅನುಸರಿಸಿ ನಡೆಸಲಾಗುವುದು.

***ವಿಷಯ ಮತ್ತು ನಿಗದಿಪಡಿಸಿರುವ ಗರಿಷ್ಠ ಅಂಕಗಳ ವಿಂಗಡಣೆ ಕೆಳಗಿನಂತಿದೆ.***

| ಕ್ರ.ಸಂ | ವಿಷಯ | ಅಂಕಗಳು |
|---|---|---|
| 01. | ಶಿಶು ಮನೋವಿಜ್ಞಾನ ಮತ್ತು ವಿಕಸನ. | 30 |
| 02. | ಬಾಷೆ: ಕನ್ನಡ / ಉರ್ದು/ಮರಾಠಿ / ತಮಿಳು / ತೆಲಗು / ಮಲಯಾಳಂ | 30 |
| 03. | ಆಂಗ್ಲ ಭಾಷೆ | 30 |
| 04. | ಪರಿಸರ ಅಧ್ಯಯನ [ವಿಜ್ಞಾನ ಮತ್ತು ಸಮಾಜ ವಿಜ್ಞಾನ] | 30 |
| 05. | ಗಣಿತ | 30 |
| | ಒಟ್ಟು | **150** |

***21] ಪರೀಕ್ಷಾ ವಿಷಯಗಳಿಗೆ ನಿಗದಿಪಡಿಸಿರುವ ಪಠ್ಯವಸ್ತು: [ಎನ್.ಸಿ.ಟಿ.ಇ., ನಿಗಧಿಪಡಿಸಿರುವ ಪರೀಕ್ಷಾ ಪಠ್ಯ ಕ್ರಮದಂತೆ]***

***01.*** ಭಾಷೆ : ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು, ಮಲಯಾಳಂ.

***02.*** ಆಂಗ್ಲ ಭಾಷೆ, [4] ಪರಿಸರ ಅಧ್ಯಯನ [ವಿಜ್ಞಾನ ಮತ್ತು ಸಮಾಜ ವಿಜ್ಞಾನ] [5] ಗಣಿತ.

***03.*** ಪ್ರಶ್ನೆಗಳ ವ್ಯಾಪ್ತಿ ಹಾಗೂ ಸ್ವರೂಪ.

***ಅ.*** ಪ್ರಶ್ನೆಗಳು ನಿಗದಿಪಡಿಸಲಾಗಿರುವ ಪಠ್ಯವಸ್ತುವಿನ ವ್ಯಾಪ್ತಿಯಲ್ಲಿ ಬರುತ್ತದೆ.

***ಆ.*** ಪ್ರಶ್ನಗಳು ವಸ್ತುನಿಷ್ಠವಾಗಿದ್ದು ಪ್ರತಿ ಪ್ರಶ್ನೆಗೆ ಒಂದು ಅಂಕ ನಿಗದಿಪಡಿಸಿದೆ.

ಇ. ಪ್ರತಿ ಪ್ರಶ್ನೆ ನಾಲ್ಕು ಉತ್ತರಗಳನ್ನು ಹೊಂದಿದ್ದು, ಇವುಗಳಲ್ಲಿ ಒಂದು ಸರಿ ಉತ್ತರವಾಗಿರುತ್ತದೆ.

***ಈ.*** ಉತ್ತರಗಳನ್ನು 'ಓ.ಎಂ.ಆರ್' ಶೀಟಿನಲ್ಲಿ ಗುರುತಿಸುವುದು.

***ಉ.*** ಪ್ರಶ್ನೆ ಪತ್ರಿಕೆಗಳು ಪ್ರತಿ ಮಾಧ್ಯಮದ ಹುದ್ದೆಗಳಿಗೆ ಆಯಾ ಮಾಧ್ಯಮದ ಭಾಷೆಗಳಲ್ಲಿ ಇರುತ್ತದೆ.

***22] ಪ್ರಮುಖವಾದ ಸೂಚನೆಗಳು:***

***01.*** ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿಗಳನ್ನು ಸಲ್ಲಿಸಬೇಕು. ನಿಗದಿತ ನಮೂನೆಯಲ್ಲಿ ಸಲ್ಲಿಸದ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಮತ್ತು ಆಯ್ಕೆಗೆ ಪರಿಗಣಿಸುವುದಿಲ್ಲ. ಅಭ್ಯರ್ಥಿಗಳು ಪ್ರವೇಶ ಪತ್ರವನ್ನು ಆನ್‌ಲೈನ್ ಮೂಲಕವೇ ಪಡೆಯತಕ್ಕದ್ದು. ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಹಾಜರಾದ ಮಾತ್ರಕ್ಕೆ ಅಭ್ಯರ್ಥಿ ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಭ್ಯರ್ಥಿಯು ಇದರ ಜೊತೆಗೆ ಆಯಾ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿ ಹೊಂದಿರತಕ್ಕದ್ದು.

***02.*** ಅರ್ಜಿಗಳನ್ನು ದಿನಾಂಕ:02.03.2013ರ ಸಂಜೆ 5.30ರೊಳಗೆ ಆನ್‌ಲೈನ್ ಮೂಲಕವೇ ಸಲ್ಲಿಸಬೇಕು. ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ. ಅಂಚೆ ಮೂಲಕ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

***03.*** ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಸಮಯಕ್ಕೆ ***ಎಲ್ಲಾ ಪ್ರಮಾಣ ಪತ್ರಗಳನ್ನು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕದ ಮೊದಲೇ ಪಡೆದಿರಬೇಕು.*** ಆದರೆ, ತಾತ್ಕಾಲಿಕ ಆಯ್ಕೆಪಟ್ಟಿಯ ಪ್ರಕಟಣೆಯ ನಂತರ ಆಯ್ಕೆ ಹೊಂದಿದ್ದಲ್ಲಿ ಅಥವಾ ಆಕ್ಷೇಪಣೆ ನೀಡುವ ಹಂತದಲ್ಲಿ ಎಲ್ಲಾ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಆಯ್ಕೆ ಪ್ರಾಧಿಕಾರಕ್ಕೆ ಸಲ್ಲಿಸಬೇಕು.

***04.*** ಅಭ್ಯರ್ಥಿಗಳು ಪಾಸ್‌ಪೋರ್ಟ್ ಅಳತೆಯ ಇತ್ತೀಚಿನ ಭಾವಚಿತ್ರವನ್ನು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವ ಸಮಯದಲ್ಲಿ ಅರ್ಜಿ ನಮೂನೆಯಲ್ಲಿ ನಿಗದಿಪಡಿಸಿರುವ ಸ್ಥಳದಲ್ಲಿಯೇ ಸ್ಕ್ಯಾನ್ ಮಾಡಿ ಸಲ್ಲಿಸುವುದು.

*05.* ಪ್ರಮಾಣ ಪತ್ರಗಳು ಪರಿಶೀಲನೆಯ ಸಮಯದಲ್ಲಿ ***ಸುಳ್ಳು ದಾಖಲೆ ಅಥವಾ ಸುಳ್ಳು ಮಾಹಿತಿ ನೀಡಿರುವುದು ಕಂಡುಬಂದಲ್ಲಿ ಅಂತಹ ಅಭ್ಯರ್ಥಿಗಳು ಆಯ್ಕೆಯಾಗುವ ಅವಕಾಶವನ್ನು ಕಳೆದುಕೊಳ್ಳುತ್ತಾರೆ.***

*06.* ಆಯ್ಕೆಪಟ್ಟಿಯಲ್ಲಿ ಸೇರ್ಪಡೆಯಾದ ಮಾತ್ರಕ್ಕೆ ಅಭ್ಯರ್ಥಿಗಳ ನೇಮಕಾತಿಗೆ ಹಕ್ಕನ್ನು ಪಡೆದುಕೊಳ್ಳುವುದಿಲ್ಲ.

*07.* ಮೇಲಿನ ನೇಮಕಾತಿಗಳು ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಆದೇಶಗಳು ಮತ್ತು ತಿದ್ದುಪಡಿಗೆ ಒಳಪಟ್ಟಿರುತ್ತದೆ.

*08.* ಯಾವುದೇ ಹಂತದಲ್ಲಿ ತಪ್ಪು ಮಾಹಿತಿಯ ಆಧಾರದ ಮೇಲೆ ಆಯ್ಕೆಯಾದ ಅಥವಾ ಅನರ್ಹತೆಯ ಕಾರಣಗಳಿಗಾಗಿ ಅಭ್ಯರ್ಥಿಯ ಹೆಸರನ್ನು ಪಟ್ಟಿಯಿಂದ ಕೈಬಿಡುವ ಅಥವಾ ನೇಮಕಾತಿ ಆದೇಶವನ್ನು ರದ್ದುಗೊಳಿಸುವ ಅಧಿಕಾರವನ್ನು ಇಲಾಖೆಯು ಕಾಯ್ದಿರಿಸಿಕೊಂಡಿರುತ್ತದೆ.

*09.* ಆಯ್ಕೆಯಾದ ಅಭ್ಯರ್ಥಿಯು ತಾನು ನೇಮಕಗೊಂಡ ಜೇಷ್ಠತಾ ಘಟಕ [ತಾಲ್ಲೂಕು]ದಲ್ಲಿ ಮಾತ್ರ ಸೇವೆ ಸಲ್ಲಿಸಬೇಕಾಗಿರುತ್ತದೆ.

*10.* ಅಭ್ಯರ್ಥಿಗಳು ಅವರ ಅರ್ಜಿಗಳಲ್ಲಿ ಭರ್ತಿ ಮಾಡಿರುವ ಮಾಹಿತಿಗಳ ಆಧಾರದ ಮೇಲೆ ಅವರಿಗೆ ಸ್ಪರ್ಧಾತ್ಮಕ ಪರೀಕ್ಷೆ ಬರೆಯಲು ಪ್ರವೇಶ ಪತ್ರಗಳನ್ನು ನೀಡುತ್ತದೆ. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಅಂಕಗಳ ಮಾಹಿತಿ, ಮೀಸಲಾತಿ, ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಪೂರ್ಣ ಮಾಹಿತಿ ನೀಡದ ಅಥವಾ ತಪ್ಪು ಮಾಹಿತಿ ನೀಡಿದ ಸಂದರ್ಭಗಳಲ್ಲಿ ಮುಂದಿನ ಆಗುಹೋಗುಗಳಿಗೆ ಅಭ್ಯರ್ಥಿಗಳೇ ಜವಾಬ್ದಾರರು.

*11.* ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಹಾಗೂ ವಯೋಮಿತಿ ಸಡಿಲಿಕೆ ಇತ್ಯಾದಿಗಳಿಗೆ ಸಂಬಂಧಿತ ವಿವರಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು. ಈ ಬಗ್ಗೆ ಅನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಮನವಿ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.

*12.* ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

*13.* ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವಾಗ ಪ್ರವೇಶ ಪತ್ರ, ಸ್ವೀಕೃತಿ ಪತ್ರ ಹಾಗೂ ಇತರೆ ದಾಖಲೆಗಳನ್ನು ಆಯ್ಕೆ ಪ್ರಕ್ರಿಯೆ ಮುಗಿಯುವ ತನಕ ಸುರಕ್ಷಿತವಾಗಿ ಇಟ್ಟುಕೊಳ್ಳತಕ್ಕದ್ದು. ಈ ಅರ್ಜಿಯನ್ನು ಭರ್ತಿ ಮಾಡುವ ವಿಧಾನ, ಮೀಸಲಾತಿ ಪ್ರಮಾಣ ಪತ್ರಗಳ ನಮೂನೆ, ಮೀಸಲಾತಿಯ [Horizontal and vertical Reservations] ವಿವರ ಹಾಗೂ ಸರ್ಕಾರಿ ಆದೇಶಗಳ ಬಗ್ಗೆ ಮಾಹಿತಿ ನೀಡಲಾಗಿದ್ದು, ಅಭ್ಯರ್ಥಿಗಳು ಅವುಗಳನ್ನು ಗಮನವಿಟ್ಟು ಓದಿಕೊಳ್ಳತಕ್ಕದ್ದು.

*14.* ದುರ್ನಡತೆ: ಒಬ್ಬ ಅಭ್ಯರ್ಥಿಯು ನಕಲು ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂಬ ಬಗ್ಗೆ ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ಆಯ್ಕೆ ಪ್ರಾಧಿಕಾರದಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದೇ ಅಲ್ಲದೇ, ಆಯ್ಕೆ ಪ್ರಾಧಿಕಾರವು ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

*15.* ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿದ ನಂತರ ಅಭ್ಯರ್ಥಿಗಳು ಆಕ್ಷೇಪಣೆ ಸಲ್ಲಿಸುವಾಗ ಮೂಲ ಅರ್ಜಿಯಲ್ಲಿ ದಾಖಲಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ಸಲ್ಲಿಸಬಹುದು. [ಅರ್ಜಿಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ] ನಮೂದಿಸಲು ಬಿಟ್ಟುಹೋಗಿದ್ದ ಯಾವುದೇ ಮಾಹಿತಿಯನ್ನು ಹೊಸದಾಗಿ ದಾಖಲಿಸಲು ಬಯಸುವ ಮಾಹಿತಿಗಳನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ಆಕ್ಷೇಪಣೆ ಮತ್ತು ಲಗತ್ತುಗಳನ್ನು ಪರಿಗಣಿಸದೇ ತಿರಸ್ಕರಿಸಲಾಗುವುದು.

*16.* ಅರ್ಜಿ ನಮೂನೆ, ಉತ್ತರ ಪತ್ರಿಕೆ, ಪ್ರವೇಶ ಪತ್ರಗಳ ನಿಗದಿತ ಸ್ಥಳಗಳಲ್ಲಿ ಎಡಗೈ ಹೆಬ್ಬೆಟ್ಟು ಗುರುತನ್ನು ಸ್ಪಷ್ಟವಾಗಿ ಹಾಕಬೇಕು. ಎಡಗೈ ಹೆಬ್ಬೆರಳ ಗುರುತು ರಹಿತ ಅರ್ಜಿಯನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸಲಾಗುವುದು.

*17.* ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ನಂತರ ಪ್ರವೇಶ ಪತ್ರದ ಪ್ರತಿಯನ್ನು ದ್ವಿಪ್ರತಿಯಲ್ಲಿ ಡೌನ್‌ಲೋಡ್ ಮಾಡಿಕೊಂಡು ಆ ಪ್ರತಿಗಳಲ್ಲಿ ಒಂದೇ ಮಾದರಿಯ ಇತ್ತೀಚಿನ ತಲಾ ಒಂದು ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು.

*18.* ನೇಮಕಾತಿ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೆ ಈ ಸಂಬಂಧ ಆಯ್ಕೆ ಪ್ರಾಧಿಕಾರಿ / ನೇಮಕಾತಿ ಪ್ರಾಧಿಕಾರಿಗಳು ನೀಡುವ ಸೂಚನೆಗಳನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್ [http://schooleducation.kar.nic.in] ನಲ್ಲಿ ಅವಲೋಕಿಸುವುದು.

*19.* ಈ ಪರೀಕ್ಷೆಯನ್ನು ಶಿಕ್ಷಕರ ಅರ್ಹತಾ ಪರೀಕ್ಷೆಯೆಂದು ಪರಿಗಣಿಸಲಾಗುವುದು. ನಿಗದಿತ ಅರ್ಹತೆ ಪಡೆದಿರುವವರಿಗೆ ಕ್ರಮ ಸಂಖ್ಯೆ 2 ರಲ್ಲಿ ತಿಳಿಸಿರುವಂತೆ ಅರ್ಹತಾ ಪ್ರಮಾಣ ಪತ್ರ ನೀಡಲಾಗುವುದು. ಮುಂದಿನ ನೇಮಕಾತಿಗಳಿಗೂ ಸಹ ಈ ಪ್ರಮಾಣ ಪತ್ರವನ್ನು ಉಪಯೋಗಿಸಬಹುದಾಗಿದೆ.

ಹೆಚ್ಚಿನ ವಿವರಗಳಿಗೆ ಆನ್‌ಲೈನ್‌ನಲ್ಲಿ ನೀಡಿರುವ ಸೂಚನೆಗಳನ್ನು ಗಮನಿಸಬೇಕು. ಹಾಗೂ ಯಾವುದೇ ಹೆಚ್ಚಿನ ಸ್ಪಷ್ಟೀಕರಣಕ್ಕೆ ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಇವರ ಕಛೇರಿಯನ್ನು ಸಂಪರ್ಕಿಸಬಹುದು.

ಆಯ್ಕೆ ಪ್ರಾಧಿಕಾರಿ ಹಾಗೂ ಜಿಲ್ಲಾ ಉಪನಿರ್ದೇಶಕರು,
ಸಾರ್ವಜನಿಕ ಶಿಕ್ಷಣ ಇಲಾಖೆ,
ಹಾಸನ ಜಿಲ್ಲೆ.

***ಹಾಸನ ಜಿಲ್ಲೆ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ಪ್ರಕಟಿಸಲಾದ ಖಾಲಿ ಹುದ್ದೆಗಳ ವರ್ಗೀಕರಣ***

***ವಿಷಯ;–ಆಂಗ್ಲ***

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|
| | | | | ಗುಂಪು | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2–ಎ | 2–ಬಿ | 3–ಎ | 3–ಬಿ | ಸಾಮಾನ್ಯ | ಒಟ್ಟು |
| ಅರಕಲಗೂಡು | 0 | 2 | 2 | ಇತರೆ | | | | | | | | | 0 |
| | | | | ಗ್ರಾ.ಅ | | | | | | | | 1 | 1 |
| | | | | ಅಂ.ವಿ. | | | | 1 | | | | | 1 |
| | | | | ಮಾ.ಸೈ | | | | | | | | | 0 |
| | | | | ಕ.ಮಾ | | | | | | | | | 0 |
| | | | | ಯೋ.ನಿ. | | | | | | | | | 0 |
| **ಒಟ್ಟು** | **0** | **2** | **2** | | **0** | **0** | **0** | **1** | **0** | **0** | **0** | **1** | **2** |

***ವಿಷಯ;–ಹಿಂದಿ***

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|
| | | | | ಗುಂಪು | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2–ಎ | 2–ಬಿ | 3–ಎ | 3–ಬಿ | ಸಾಮಾನ್ಯ | ಒಟ್ಟು |
| ಅರಕಲಗೂಡು | 0 | 1 | 1 | ಇತರೆ | | | | 1 | | | | | 1 |
| | | | | ಗ್ರಾ.ಅ | | | | | | | | | |
| | | | | ಅಂ.ವಿ. | | | | | | | | | |
| | | | | ಮಾ.ಸೈ | | | | | | | | | |
| | | | | ಕ.ಮಾ | | | | | | | | | |
| | | | | ಯೋ.ನಿ. | | | | | | | | | |
| **ಒಟ್ಟು** | **0** | **1** | **1** | | | | | **1** | | | | | **1** |

***ವಿಷಯ;–ವಿಜ್ಞಾನ***

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|
| | | | | ಗುಂಪು | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2–ಎ | 2–ಬಿ | 3–ಎ | 3–ಬಿ | ಸಾಮಾನ್ಯ | ಒಟ್ಟು |
| ಅರಕಲಗೂಡು | 0 | 3 | 3 | ಇತರೆ | | | | | | | | 1 | 1 |
| | | | | ಗ್ರಾ.ಅ | | | | | 1 | | | | 1 |
| | | | | ಅಂ.ವಿ. | | | | | | | | | 0 |
| | | | | ಮಾ.ಸೈ | | | | | | | | 1 | 1 |
| | | | | ಕ.ಮಾ | | | | | | | | | 0 |
| | | | | ಯೋ.ನಿ. | | | | | | | | | 0 |
| **ಒಟ್ಟು** | **0** | **3** | **3** | | **0** | **0** | **0** | **0** | **1** | **0** | **0** | **2** | **3** |

*ವಿಷಯ;–ಕನ್ನಡ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|
| | | | | ಗುಂಪು | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2–ಎ | 2–ಬಿ | 3–ಎ | 3–ಬಿ | ಸಾಮಾನ್ಯ | ಒಟ್ಟು |
| ಅರಕಲಗೂಡು | 0 | 4 | 4 | ಇತರೆ | | | | | | | | 1 | 1 |
| | | | | ಗ್ರಾ.ಅ | | | | | | | 1 | 1 | 2 |
| | | | | ಅಂ.ವಿ. | | | | | | | | | |
| | | | | ಮಾ.ಸೈ | | | | 1 | | | | | 1 |
| | | | | ಕ.ಮಾ | | | | | | | | | |
| | | | | ಯೋ.ನಿ. | | | | | | | | | |
| **ಒಟ್ಟು** | **0** | **4** | **4** | | | | | **1** | | | **1** | **2** | **4** |

*ವಿಷಯ;–ಆಂಗ್ಲ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|
| | | | | ಗುಂಪು | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2–ಎ | 2–ಬಿ | 3–ಎ | 3–ಬಿ | ಸಾಮಾನ್ಯ | ಒಟ್ಟು |
| ಚನ್ನರಾಯಪಟ್ಟಣ | 0 | 4 | 4 | ಇತರೆ | | | | | | 1 | 1 | | 2 |
| | | | | ಗ್ರಾ.ಅ | | | | | | | | 1 | 1 |
| | | | | ಅಂ.ವಿ. | | | | | | | | | 0 |
| | | | | ಮಾ.ಸೈ | | | | | | | | 1 | 1 |
| | | | | ಕ.ಮಾ | | | | | | | | | 0 |
| | | | | ಯೋ.ನಿ. | | | | | | | | | 0 |
| **ಒಟ್ಟು** | **0** | **4** | **4** | | **0** | **0** | **0** | **0** | **0** | **1** | **1** | **2** | **4** |

*ವಿಷಯ;–ಹಿಂದಿ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|
| | | | | ಗುಂಪು | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2–ಎ | 2–ಬಿ | 3–ಎ | 3–ಬಿ | ಸಾಮಾನ್ಯ | ಒಟ್ಟು |
| ಚನ್ನರಾಯಪಟ್ಟಣ | 0 | 2 | 2 | ಇತರೆ | 1 | | | | | | | 0 | 1 |
| | | | | ಗ್ರಾ.ಅ | | | | | | | | | 0 |
| | | | | ಅಂ.ವಿ. | | | | | | | | 1 | 1 |
| | | | | ಮಾ.ಸೈ | | | | | | | | | 0 |
| | | | | ಕ.ಮಾ | | | | | | | | | 0 |
| | | | | ಯೋ.ನಿ. | | | | | | | | | 0 |
| **ಒಟ್ಟು** | **0** | **2** | **2** | | **1** | **0** | **0** | **0** | **0** | **0** | **0** | **1** | **2** |

*ವಿಷಯ;-ವಿಜ್ಞಾನ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | | |
|---|---|---|---|---|---|---|---|---|---|---|---|---|---|---|
| | | | | ಗುಂಪು | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2-ಎ | 2-ಬಿ | 3-ಎ | 3-ಬಿ | ಸಾಮಾನ್ಯ | ಒಟ್ಟು |
| ಚನ್ನರಾಯಪಟ್ಟಣ | 0 | 6 | 6 | ಇತರೆ | | | | 1 | | 1 | 1 | 2 | 5 |
| | | | | ಗ್ರಾ.ಅ | | | | | | | | 1 | 1 |
| | | | | ಅಂ.ವಿ. | | | | | | | | | 0 |
| | | | | ಮಾ.ಸೈ | | | | | | | | | 0 |
| | | | | ಕ.ಮಾ | | | | | | | | | 0 |
| | | | | ಯೋ.ನಿ. | | | | | | | | | 0 |
| **ಒಟ್ಟು** | **0** | **6** | **6** | | **0** | **0** | **0** | **1** | **0** | **1** | **1** | **3** | **6** |

*ವಿಷಯ;-ಕನ್ನಡ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|
| | | | | ಗುಂಪು | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2-ಎ | 2-ಬಿ | 3-ಎ | 3-ಬಿ | ಸಾಮಾನ್ಯ | ಒಟ್ಟು |
| ಚನ್ನರಾಯಪಟ್ಟಣ | 0 | 8 | 8 | ಇತರೆ | 1 | | | | | 1 | 1 | 2 | 5 |
| | | | | ಗ್ರಾ.ಅ | | | | 1 | | | | 1 | 2 |
| | | | | ಅಂ.ವಿ. | | | | | | | | 1 | 1 |
| | | | | ಮಾ.ಸೈ | | | | | | | | | 0 |
| | | | | ಕ.ಮಾ | | | | | | | | | 0 |
| | | | | ಯೋ.ನಿ. | | | | | | | | | 0 |
| **ಒಟ್ಟು** | **0** | **8** | **8** | | **1** | **0** | **0** | **1** | **0** | **1** | **1** | **4** | **8** |

*ವಿಷಯ;-ಆಂಗ್ಲ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|
| | | | | ಗುಂಪು | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2-ಎ | 2-ಬಿ | 3-ಎ | 3-ಬಿ | ಸಾಮಾನ್ಯ | ಒಟ್ಟು |
| ಹೊಳೆನರಸೀಪುರ | 0 | 4 | 4 | ಇತರೆ | 1 | | | 1 | | | | 1 | 3 |
| | | | | ಗ್ರಾ.ಅ | | | | | | | | | 0 |
| | | | | ಅಂ.ವಿ. | | | | | | | | 1 | 1 |
| | | | | ಮಾ.ಸೈ | | | | | | | | | 0 |
| | | | | ಕ.ಮಾ | | | | | | | | | 0 |
| | | | | ಯೋ.ನಿ. | | | | | | | | | 0 |
| **ಒಟ್ಟು** | **0** | **4** | **4** | | **1** | **0** | **0** | **1** | **0** | **0** | **0** | **2** | **4** |

*ವಿಷಯ;–ಹಿಂದಿ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|
| | | | | ಗುಂಪು | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2–ಎ | 2–ಬಿ | 3–ಎ | 3–ಬಿ | ಸಾಮಾನ್ಯ | ಒಟ್ಟು |
| ಹೊಳೆನರಸೀಪುರ | 0 | 2 | 2 | ಇತರೆ | | | 1 | | | | | | 1 |
| | | | | ಗ್ರಾ.ಅ | | | | | | | | 1 | 1 |
| | | | | ಅಂ.ವಿ. | | | | | | | | | |
| | | | | ಮಾ.ಸೈ | | | | | | | | | |
| | | | | ಕ.ಮಾ | | | | | | | | | |
| | | | | ಯೋ.ನಿ. | | | | | | | | | |
| **ಒಟ್ಟು** | **0** | **2** | **2** | | | | **1** | | | | | **1** | **2** |

*ವಿಷಯ;–ವಿಜ್ಞಾನ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|
| | | | | ಗುಂಪು | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2–ಎ | 2–ಬಿ | 3–ಎ | 3–ಬಿ | ಸಾಮಾನ್ಯ | ಒಟ್ಟು |
| ಹೊಳೆನರಸೀಪುರ | 0 | 6 | 6 | ಇತರೆ | | | | 1 | | 1 | | 2 | 4 |
| | | | | ಗ್ರಾ.ಅ | 1 | | | | | | | 1 | 2 |
| | | | | ಅಂ.ವಿ. | | | | | | | | | 0 |
| | | | | ಮಾ.ಸೈ | | | | | | | | | 0 |
| | | | | ಕ.ಮಾ | | | | | | | | | 0 |
| | | | | ಯೋ.ನಿ. | | | | | | | | | 0 |
| **ಒಟ್ಟು** | **0** | **6** | **6** | | **1** | **0** | **0** | **1** | **0** | **1** | **0** | **3** | **6** |

*ವಿಷಯ;–ಕನ್ನಡ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|
| | | | | ಗುಂಪು | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2–ಎ | 2–ಬಿ | 3–ಎ | 3–ಬಿ | ಸಾಮಾನ್ಯ | ಒಟ್ಟು |
| ಹೊಳೆನರಸೀಪುರ | 0 | 8 | 8 | ಇತರೆ | 1 | | | | | | | 2 | 3 |
| | | | | ಗ್ರಾ.ಅ | | | | 1 | | | | 1 | 2 |
| | | | | ಅಂ.ವಿ. | 1 | | | 1 | | | | | 2 |
| | | | | ಮಾ.ಸೈ | | | | | | | | 1 | 1 |
| | | | | ಕ.ಮಾ | | | | | | | | | 0 |
| | | | | ಯೋ.ನಿ. | | | | | | | | | 0 |
| **ಒಟ್ಟು** | **0** | **8** | **8** | | **2** | **0** | **0** | **2** | **0** | **0** | **0** | **4** | **8** |

***ವಿಷಯ : ಕನ್ನಡ***

| ತಾಲ್ಲೂಕು | ಬ್ಯಾಕ್‌ಲಾಗ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|
| | | | | **ಗುಂಪು** | **ಪ ಜಾ** | **ಪ ಪಂ** | **ಪ್ರ 1** | **2ಎ** | **2ಬಿ** | **3ಎ** | **3ಬಿ** | **ಸಾಮಾನ್ಯ** | **ಒಟ್ಟು** |
| ಸಕಲೇಶಪುರ | | 8 | 8 | ಇತರೆ | | | | | 1 | | | 1 | 2 |
| | | | | ಗ್ರಾ ಅ | | | | 1 | | | | 2 | 3 |
| | | | | ಅಂ ವಿ | | | | | | | | | 0 |
| | | | | ಮಾ ಸೈ | | | | | | | | | 0 |
| | | | | ಕ ಮಾ | | | | | | | | 1 | 1 |
| | | | | ಯೋ ನಿ | 1 | | | 1 | | | | | 2 |
| | | | | **ಒಟ್ಟು** | **1** | **0** | **0** | **2** | **1** | **0** | **0** | **4** | **8** |

***ವಿಷಯ : ಆಂಗ್ಲ***

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|
| | | | | **ಗುಂಪು** | **ಪ.ಜಾ** | **ಪ.ಪಂ** | **ಪ್ರವರ್ಗ-1** | **2-ಎ** | **2-ಬಿ** | **3-ಎ** | **3-ಬಿ** | **ಸಾಮಾನ್ಯ** | **ಒಟ್ಟು** |
| ಸಕಲೇಶಪುರ | | 4 | 4 | ಇತರೆ | | | | | | | | | 0 |
| | | | | ಗ್ರಾ ಅ | | | 1 | | | | | 1 | 2 |
| | | | | ಅಂ ವಿ | | | | | | | | | 0 |
| | | | | ಮಾ ಸೈ | 1 | | | | | | | 1 | 2 |
| | | | | ಕ ಮಾ | | | | | | | | | 0 |
| | | | | ಯೋ ನಿ | | | | | | | | | 0 |
| | | | | **ಒಟ್ಟು** | **1** | **0** | **1** | **0** | **0** | **0** | **0** | **2** | **4** |

***ವಿಷಯ : ಹಿಂದಿ***

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|
| | | | | **ಗುಂಪು** | **ಪ.ಜಾ** | **ಪ.ಪಂ** | **ಪ್ರವರ್ಗ-1** | **2-ಎ** | **2-ಬಿ** | **3-ಎ** | **3-ಬಿ** | **ಸಾಮಾನ್ಯ** | **ಒಟ್ಟು** |
| ಸಕಲೇಶಪುರ | | 2 | 2 | ಇತರೆ | | | | 1 | | | | | 1 |
| | | | | ಗ್ರಾ ಅ | | | | | | | | 1 | 1 |
| | | | | ಅಂ ವಿ | | | | | | | | | 0 |
| | | | | ಮಾ ಸೈ | | | | | | | | | 0 |
| | | | | ಕ ಮಾ | | | | | | | | | 0 |
| | | | | ಯೋ ನಿ | | | | | | | | | 0 |
| | | | | **ಒಟ್ಟು** | **0** | **0** | **0** | **1** | **0** | **0** | **0** | **1** | **2** |

*ವಿಷಯ : ವಿಜ್ಞಾನ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|
| | | | | ಗುಂಪು | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2–ಎ | 2–ಬಿ | 3–ಎ | 3–ಬಿ | ಸಾಮಾನ್ಯ | ಒಟ್ಟು |
| ಸಕಲೇಶಪುರ | | 6 | 6 | ಇತರೆ | | | | | | | | 2 | 2 |
| | | | | ಗ್ರಾ ಅ | | | | 1 | | | | 1 | 2 |
| | | | | ಅಂ ವಿ | | | | | 1 | | | | 1 |
| | | | | ಮಾ ಸೈ | | | | | | | | | 0 |
| | | | | ಕ ಮಾ | 1 | | | | | | | | 1 |
| | | | | ಯೋ ನಿ | | | | | | | | | 0 |
| | | | | **ಒಟ್ಟು** | **1** | **0** | **0** | **1** | **1** | **0** | **0** | **3** | **6** |

*ಉಪನಿರ್ದೇಶಕರು ಹಾಗೂ ಆಯ್ಕೆ ಪ್ರಾಧಿಕಾರಿಗಳು,*
*ಸಾ.ಶಿ.ಇಲಾಖೆ, ಹಾಸನ*


# ವಿಶೇಷ ರಾಜ್ಯ ಪತ್ರಿಕೆ

| ಭಾಗ – V | ಬೆಂಗಳೂರು, ಶನಿವಾರ, ಫೆಬ್ರವರಿ ೨, ೨೦೧೩ (ಮಾಘ ೧೩, ಶಕ ವರ್ಷ ೧೯೩೪) | ನಂ.೧೨೫ |
|---|---|---|
| ***Part – V*** | ***Bangalore, Saturday, February 2, 2013 (Magha 13, Shaka Varsha 1934)*** | ***No. 125*** |


## ಸಾರ್ವಜನಿಕ ಶಿಕ್ಷಣ ಇಲಾಖೆ
## ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಕೊಡಗು ಜಿಲ್ಲೆ

### ನೇಮಕಾತಿ ಅಧಿಸೂಚನೆ

**ಸಂಖ್ಯೆ:ಸಿ3[1]ಪ್ರಾಶಿಅ:ನೇಮಕ:15:2011–12, ಬೆಂಗಳೂರು, ದಿನಾಂಕ:02ನೇ ಫೆಬ್ರವರಿ, 2013**

**ವಿಷಯ:** 2012–13ನೇ ಸಾಲಿಗಾಗಿ ಸರ್ಕಾರಿ ಪ್ರಾಥಮಿಕ ಶಾಲಾ ಸಹಶಿಕ್ಷಕ / ಶಿಕ್ಷಕಿ ವೃಂದದ ಹುದ್ದೆಗಳನ್ನು ನೇರ ನೇಮಕಾತಿಯಿಂದ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಕೃತ ಪ್ರಕಟಣೆ ಸಂ:ಇಡಿ:ಡಿಪಿಎಆರ್:41:ಎಸ್‌ಆರ್‌ಇ:2001, ದಿನಾಂಕ:09.08.2001.

2] ಸರ್ಕಾರಿ ಆದೇಶ ಸಂ:ಸಿಆಸುಇ:08:ಸಹಿಮ:1995, ದಿನಾಂಕ:20.06.1995.

3] ಸರ್ಕಾರಿ ಆದೇಶ ಸಂ:ಸಿಆಸುಇ:97:ಸನೆನಿ:2002, ದಿನಾಂಕ:22.11.2002.

4] ಸರ್ಕಾರಿ ಆದೇಶ ಸಂ:ಸಿಆಸುಇ:53:ಸೇನೇನಿ:2007, ದಿನಾಂಕ:04.01.2008.

5] ಸರ್ಕಾರಿ ಆದೇಶ ಸಂ:ಇಡಿ:21:ಯೋಯೋಕ:2010, ದಿನಾಂಕ:02.11.2012.

6] ಸರ್ಕಾರಿ ಆದೇಶ ಸಂ:ಇಡಿ:238:ಪಿಬಿಐ:2012, ದಿನಾಂಕ:21.01.2013.

ಸಾರ್ವಜನಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಪರೀಕ್ಷೆ ಮೂಲಕ ಅಂದರೆ ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ [ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್] [ರೆಕ್ರೂಟ್‌ಮೆಂಟ್] [ಅಮೆಂಡ್‌ಮೆಂಟ್] ರೂಲ್ಸ್–2001 [ಸಂ:ಡಿಪಿಎಆರ್:41:ಎಸ್‌ಆರ್‌ಇ:2001, ದಿ:09.08.2001]ರ ನಿಯಮಗಳನ್ವಯ ಆಯ್ಕೆ ಮಾಡಲು ಈ ನೇಮಕಾತಿ ಅಧಿಸೂಚನೆ ಹೊರಡಿಸಿದೆ. ನೇಮಕಾತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನ ಅಂದರೆ ದಿನಾಂಕ:02.03.2013ರಂದು ಅರ್ಹರಾಗಿರುವ ಅಭ್ಯರ್ಥಿಗಳಿಂದ ನಿಗದಿಪಡಿಸಿರುವ ಅರ್ಜಿ ನಮೂನೆಯಲ್ಲಿ ಆನ್‌ಲೈನ್ ಮೂಲಕ ಅರ್ಜಿಗಳನ್ನು ಕರೆಯಲಾಗಿದೆ. ಇತರೆ ಯಾವುದೇ ನಮೂನೆಯಲ್ಲಿ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಆಯ್ಕೆ ಮಾಡಲು ಉಲ್ಲೇಖದಲ್ಲಿ ನಮೂದಿಸಿರುವ ನೇಮಕಾತಿ ನಿಯಮಗಳು, ಮೀಸಲಾತಿ ನಿಯಮಗಳು ಹಾಗೂ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರದ ಆದೇಶಗಳ ಪ್ರಕಾರ ಇರುವ ಪ್ರಚಲಿತ ನಿಯಮಗಳನ್ನು ಅನುಸರಿಸಿ ಆಯ್ಕೆ ಮಾಡಲು ಪ್ರಕಟಣೆಯನ್ನು ಸಾರ್ವಜನಿಕರ ತಿಳುವಳಿಕೆಗಾಗಿ ನೀಡಲಾಗಿದೆ.

***ಟಿಪ್ಪಣಿ:*** ಈಗ ಅಧಿಸೂಚಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

***01] ಆಯ್ಕೆಗಾಗಿ ಪ್ರಕಟಿಸಿರುವ ಹುದ್ದೆಗಳು ಹಾಗೂ ವೇತನ ಶ್ರೇಣಿ:***

***01.*** ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ], ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು, ಮಲಯಾಳಂ ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

***02.*** ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ವಿಜ್ಞಾನ] ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು, ಮಲಯಾಳಂ ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

***03.*** ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ಆಂಗ್ಲ ಭಾಷೆ] ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು, ಮಲಯಾಳಂ ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

***04.*** ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ಹಿಂದಿ] ಕನ್ನಡ ಮಾಧ್ಯಮದ ಶಾಲೆಗಳಲ್ಲಿ ಹುದ್ದೆಗಳ ಸಂಖ್ಯೆ ಹಾಗೂ ವಿಷಯಗಳು ಸಂಬಂಧಿಸಿದ ಅಧಿಸೂಚನೆಯಲ್ಲಿ ನಮೂದಿಸಿರುವ ಮ್ಯಾಟ್ರಿಕ್ಸ್‌ಗೆ ಅನುಗುಣವಾಗಿರುತ್ತದೆ. ಮ್ಯಾಟ್ರಿಕ್ಸ್ ಪ್ರತಿಯನ್ನು ಮಾಹಿತಿ ಪುಸ್ತಕದೊಂದಿಗೆ ಲಗತ್ತಿಸಿದೆ.

***ವೇತನ ಶ್ರೇಣಿ–[13600–26700]:–***

13600–300–14200–350–15600–400–17200–450–19000–500–21000–6000–24600–700–26700

***02] ಆಯ್ಕೆಗೆ ಅರ್ಹತೆ:***

ಆಯ್ಕೆಗೆ ಅರ್ಹತೆ ಪಡೆಯಲು ಅರ್ಜಿ ಸ್ವೀಕರಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳು ಆಯಾ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿ ಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿಯನ್ನು ಹೊಂದಿರಬೇಕು. ಶಿಕ್ಷಕರ ಅರ್ಹತಾ ಪರೀಕ್ಷೆಯ ಮಾದರಿಯಲ್ಲಿ ನಡೆಸಲಾಗುವ ಸದರಿ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. ಅಲ್ಲದೆ, ಈ ಪರೀಕ್ಷೆಯಲ್ಲಿ ಎನ್.ಸಿ.ಟಿ.ಇ ನಿಯಮಾವಳಿಗಳಂತೆ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಕನಿಷ್ಠ ಶೇ.60 ಅಂಕಗಳು ಮತ್ತು ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ / ಇತರೆ ಹಿಂದುಳಿದ ವರ್ಗದ ಅಭ್ಯರ್ಥಿಗಳಿಗೆ ಕನಿಷ್ಠ ಶೇ.55 ಹಾಗೂ ಅಂಗವಿಕಲ ಮತ್ತು ಮಾಜಿ ಸೈನಿಕ ವರ್ಗದಲ್ಲಿ ಕನಿಷ್ಠ ಶೇ.50 ಅಂಕಗಳನ್ನು ಗಳಿಸಬೇಕಾಗುತ್ತದೆ. ಈ ಅಂಕಗಳನ್ನು ಪಡೆದ ಅಭ್ಯರ್ಥಿಗಳು ಮಾತ್ರ ಆಯ್ಕೆಗೆ ಅರ್ಹತೆ ಹೊಂದುತ್ತಾರೆ. ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಲ್ಲದೆ, ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಅವರು ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ.ಯಲ್ಲಿ ಆ ಭಾಷೆಯ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರಬೇಕು ಅಥವಾ ಪ್ರಥಮ / ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು.

***03] ನಿಗದಿತ ಅರ್ಜಿ ನಮೂನೆ ಸಲ್ಲಿಸುವ ವಿಧಾನ:***

ಅಭ್ಯರ್ಥಿಯು ಆನ್‌ಲೈನ್ [ON LINE] ಮೂಲಕ ಇಲಾಖೆಯ ಅಧಿಕೃತ ವೆಬ್‌ಸೈಟ್ [http://schooleducation.kar.nic.in] ಮುಖಾಂತರ ಅರ್ಜಿ ಸಲ್ಲಿಸಬೇಕು. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶ ಇರುವುದಿಲ್ಲ. ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ನಂತರ [After submission of application] ದೊರೆಯುವ ಗಣಕೀಕೃತ ಅರ್ಜಿ ಸಂಖ್ಯೆಯನ್ನು ಪಡೆದುಕೊಳ್ಳುವುದು ಮತ್ತು ಸದರಿ ಸಂಖ್ಯೆಯನ್ನು ಕಡ್ಡಾಯವಾಗಿ ಬರೆದಿಟ್ಟುಕೊಳ್ಳತಕ್ಕದ್ದು. ಈ ಅರ್ಜಿ ಸಂಖ್ಯೆಯು ನೇಮಕಾತಿ ಪ್ರಕ್ರಿಯೆಯ ಎಲ್ಲಾ ಹಂತಗಳಿಗೆ ಅವಶ್ಯಕವಾಗಿರುತ್ತದೆ. ಆನ್ ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಗಳು ಸ್ವೀಕೃತಿ ಪತ್ರ ಮತ್ತು ಚಲನ್ ಪ್ರತಿಗಳ ಮುದ್ರಿತ ಪ್ರತಿಗಳನ್ನು ತೆಗೆದುಕೊಳ್ಳತಕ್ಕದ್ದು. ಮುದ್ರಿತ ಚಲನ್ ಪ್ರತಿಯನ್ನು ಆಧರಿಸಿ ಪರೀಕ್ಷಾ ಶುಲ್ಕವನ್ನು ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಯಾವುದಾದರೂ ಶಾಖೆಯಲ್ಲಿ ಪಾವತಿಸಬಹುದು. ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ. ಹಾಗೂ ಸದರಿ ಶುಲ್ಕವನ್ನು ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಈ ಕೆಳಕಂಡಂತೆ ನಿಗದಿಪಡಿಸಿದ ಅರ್ಜಿ ಶುಲ್ಕವನ್ನು ಕೊನೆಯ ದಿನಾಂಕದೊಳಗೆ ಆನ್‌ಲೈನ್ ಮೂಲಕವೇ ಪಾವತಿಸುವುದು. ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶಪತ್ರಗಳನ್ನು ಮೇಲೆ ನಮೂದಿಸಿರುವ ವೆಬ್‌ಸೈಟ್‌ನಲ್ಲಿ ಡೌನ್‌ಲೋಡ್ ಮಾಡಿಕೊಳ್ಳಬೇಕು. ಪ್ರವೇಶ ಪತ್ರಗಳನ್ನು ಡೌನ್‌ಲೋಡ್ ಮಾಡಿಕೊಳ್ಳಲು ನಿಗದಿಪಡಿಸಿದ ಅವಧಿಯನ್ನು ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಆನ್‌ಲೈನ್ ಅರ್ಜಿಯನ್ನು ಸಲ್ಲಿಸುವಾಗ ಅಭ್ಯರ್ಥಿಗೆ ನೀಡಿರುವ ನೊಂದಣಿ ಸಂಖ್ಯೆ ಮತ್ತು ಇತರೆ ಮಾಹಿತಿಯನ್ನು ವೆಬ್‌ಸೈಟ್‌ನಲ್ಲಿ ನಮೂದಿಸಿ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರವನ್ನು ಡೌನ್‌ಲೋಡ್ ಮಾಡಿಕೊಳ್ಳುವುದು. ಕೊನೆಯ ದಿನಾಂಕದ ನಂತರ ಪಾವತಿಸಿದ ಅರ್ಜಿ ಶುಲ್ಕವನ್ನು ಪರಿಗಣಿಸಲಾಗುವುದಿಲ್ಲ ಮತ್ತು ಸ್ವೀಕರಿಸಲಾಗುವುದಿಲ್ಲ. ಅರ್ಜಿಗಳನ್ನು ಆನ್‌ಲೈನ್ ಮೂಲಕ ಭರ್ತಿ ಮಾಡಬೇಕಾಗಿದ್ದು, ಈ ಬಗ್ಗೆ ಮಾರ್ಗಸೂಚಿಯನ್ನು ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗಿದೆ.

***04] ಅರ್ಜಿ ಸಲ್ಲಿಸಲು ಪಾವತಿಸಬೇಕಾದ ಶುಲ್ಕ:***

***01.*** ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ – ರೂ. 200/–

***02.*** ಇತರೆ ಎಲ್ಲಾ ಅಭ್ಯರ್ಥಿಗಳಿಗೆ – ರೂ. 400/–

***03.*** ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್:142:ಎಸ್‌ಆರ್‌ಆರ್:2006, ದಿ:05.11.2007ರ ರೀತ್ಯಾ ಅಂಗವಿಕಲ ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕ ಪಾವತಿಸಲು ವಿನಾಯ್ತಿ ಕಲ್ಪಿಸಿದೆ.

***05] ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ:***

ದಿನಾಂಕ:02.03.2013ರ ಸಂಜೆ 5.30ರೊಳಗೆ ಅಥವಾ ಅದಕ್ಕೂ ಮೊದಲು.

***06] ವಿವಿಧ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಬಗ್ಗೆ:***

ಎಲ್ಲಾ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಒಂದೇ ಅರ್ಜಿ ನಮೂನೆಯನ್ನು ನಿಗದಿಪಡಿಸಿದೆ.

ಅಭ್ಯರ್ಥಿಗಳು ಒಂದೇ ಅರ್ಜಿಯಲ್ಲಿ ಒಂದಕ್ಕಿಂತ ಹೆಚ್ಚು ವಿಷಯದ ಹುದ್ದೆಗಳಿಗೆ ಅರ್ಜಿ ಸಲ್ಲಿಸಬಹುದಾಗಿದೆ. ಪ್ರತ್ಯೇಕ ಅರ್ಜಿಗಳ ಅವಶ್ಯಕತೆ ಇರುವುದಿಲ್ಲ. ಆದರೆ, ಹುದ್ದೆಗಳಿಗೆ ತಮ್ಮ ಆದ್ಯತೆಯನ್ನು ನಮೂದಿಸಬೇಕು. ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿಯರ ವೃಂದದ ವಿಷಯಗಳ ಹಾಗೂ ವಿವಿಧ

ಮಾಧ್ಯಮದ ಬ್ಲಾಕ್‌ವಾರು ಹುದ್ದೆಗಳ ಸಂಖ್ಯೆ ಮತ್ತು ಮೀಸಲಾತಿ ವರ್ಗೀಕರಣದ ವಿವರಗಳನ್ನು ಈ ಅಧಿಸೂಚನೆಗೆ ಲಗತ್ತಿಸಿರುವ *"ವರ್ಗೀಕರಣದ ಅನುಬಂಧದಲ್ಲಿ"* ಪ್ರತ್ಯೇಕವಾಗಿ ನೀಡಲಾಗಿದೆ.

***07] ಅಭ್ಯರ್ಥಿಗಳ ಅರ್ಹತೆ:***

ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ಅರ್ಹತೆಗಳು.

- ***ವಿದ್ಯಾರ್ಹತೆ :*** ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಯು ನೇಮಕಾತಿ ನಿಯಮಗಳಲ್ಲಿ ನಿಗದಿಗೊಳಿಸಲಾಗಿರುವ ವಿದ್ಯಾರ್ಹತೆ ಹೊಂದಿರಬೇಕು. ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ವಿದ್ಯಾರ್ಹತೆ ವಿವರಗಳು ಕೆಳಗಿನಂತೆ ಇರುತ್ತವೆ.

***I ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ] ಹುದ್ದೆಗಳಿಗೆ:***

*ಅ.* ಪಿ.ಯು.ಸಿ ಮತ್ತು ಟಿ.ಸಿ.ಹೆಚ್ / ಡಿ.ಇಡಿ., ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.

ಆದರೆ 1989ಕ್ಕಿಂತ ಮೊದಲು ಟಿ.ಸಿ.ಹೆಚ್. ಕೋರ್ಸಿಗೆ ಪ್ರವೇಶ ಪಡೆದ ಅಭ್ಯರ್ಥಿಗಳು.

ಎಸ್.ಎಸ್.ಎಲ್.ಸಿ ಮತ್ತು ಟಿ.ಸಿ.ಹೆಚ್ ಅಥವಾ ಪಿ.ಯು.ಸಿ ಇಂಟರ್ನ್‌ಶಿಪ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದಲ್ಲಿ ಅರ್ಹತೆ ಪಡೆಯುತ್ತಾರೆ.

*ಆ.* ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ/ ಪಿ.ಯು.ಸಿ / ಟಿ.ಸಿ.ಹೆಚ್ / ಡಿ.ಇಡಿ., ಯನ್ನು ಅಭ್ಯಾಸ ಮಾಡಿರಬೇಕು.

***ಅಥವಾ***

ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷೆಯನ್ನು ಎಸ್.ಎಸ್.ಎಲ್.ಸಿ / ಪಿ.ಯು.ಸಿ / ಟಿ.ಸಿ.ಹೆಚ್ / ಡಿ.ಇಡಿ., ನಲ್ಲಿ ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡಿರಬೇಕು.

***ಅಥವಾ***

***ಕನ್ನಡ ಮಾಧ್ಯಮದ ಹುದ್ದೆಗಳಿಗೆ :*** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಕನ್ನಡ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

***II ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ವಿಜ್ಞಾನ] ಹುದ್ದೆಗಳಿಗೆ:***

*01.* ಪಿ.ಯು.ಸಿ.ಯಲ್ಲಿ ವಿಜ್ಞಾನ ಮತ್ತು ಗಣಿತ ವಿಷಯಗಳನ್ನು ಐಚ್ಛಿಕ ವಿಷಯವನ್ನಾಗಿ ಅಭ್ಯಾಸ ಮಾಡಿರಬೇಕು ಮತ್ತು ಟಿ.ಸಿ.ಹೆಚ್ / ಡಿ.ಇಡಿ., ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.

*02.* ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ/ ಪಿ.ಯು.ಸಿ / ಟಿ.ಸಿ.ಹೆಚ್ / ಡಿ.ಇಡಿ., ನ್ನು ಅಭ್ಯಾಸ ಮಾಡಿರಬೇಕು.

***ಅಥವಾ***

ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷೆಯನ್ನು ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ ಅಥವಾ ಟಿ.ಸಿ.ಹೆಚ್/ಡಿ.ಇಡಿ., ನಲ್ಲಿ ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಭ್ಯಾಸ ಮಾಡಿರಬೇಕು.

***ಅಥವಾ***

***ಕನ್ನಡ ಮಾಧ್ಯಮದ ಹುದ್ದೆಗಳಿಗೆ :*** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಕನ್ನಡ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

***III ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ಆಂಗ್ಲ ಭಾಷೆ] ಹುದ್ದೆಗಳಿಗೆ:***

*01.* ಪಿ.ಯು.ಸಿ. ಮತ್ತು ಟಿ.ಸಿ.ಹೆಚ್ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.

*02.* ಪಿ.ಯು.ಸಿ.ಯಲ್ಲಿ ಆಂಗ್ಲ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಭ್ಯಾಸ ಮಾಡಿರಬೇಕು.

***ಅಥವಾ***

ಪಿ.ಯು.ಸಿ ಮತ್ತು ಟಿ.ಸಿ.ಹೆಚ್.ನ್ನು ಆಂಗ್ಲ ಮಾಧ್ಯಮದಲ್ಲಿ ಅಭ್ಯಾಸ ಮಾಡಿರಬೇಕು.

ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಮಾಧ್ಯಮದ ಭಾಷೆಯನ್ನು ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ.ಯಲ್ಲಿ ಪ್ರಥಮ / ದ್ವಿತೀಯ ಭಾಷೆಯನ್ನಾಗಿ ಓದಿರಬೇಕು.

***ಅಥವಾ***

***ಕನ್ನಡ ಮಾಧ್ಯಮದ ಹುದ್ದೆಗಳಿಗೆ :*** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಕನ್ನಡ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

***ಸೂಚನೆ:***

1989ಕ್ಕಿಂತ ಮುಂಚೆ ಇದ್ದ ಪಿ.ಯು.ಸಿ ಇಂಟರ್ನ್‌ಶಿಪ್ ಪರೀಕ್ಷೆಯನ್ನು ಎಸ್.ಎಸ್.ಎಲ್.ಸಿ ನಂತರ ಟಿ.ಸಿ.ಹೆಚ್.ಗೆ ತತ್ಸಮಾನ ಪರೀಕ್ಷೆ ಎಂದು ಪರಿಗಣಿಸಿರುವುದರಿಂದ ಪಿ.ಯು.ಸಿ ಇಂಟರ್ನ್‌ಶಿಪ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿರುವ ಅಭ್ಯರ್ಥಿಗಳು ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ಆಂಗ್ಲ ಭಾಷಾ ಮತ್ತು ವಿಜ್ಞಾನ ಹುದ್ದೆಗಳಿಗೆ ಅರ್ಹರಾಗುವುದಿಲ್ಲ. ಈ ಬಗ್ಗೆ ವೃಂದ ಮತ್ತು ನೇಮಕಾತಿ ನಿಯಮಗಳ–2001ರ ತಿದ್ದುಪಡಿಯಲ್ಲಿ ನಿಯಮ–66ರ ವಿದ್ಯಾರ್ಹತೆ ಕಾಲಂನಲ್ಲಿ ಸ್ಪಷ್ಟವಾಗಿ ನಮೂದಿಸಲಾಗಿದೆ. 1988ರ ನಂತರ ಪಿ.ಯು.ಸಿ ಇಂಟರ್ನ್‌ಶಿಪ್ ಪರೀಕ್ಷೆಯನ್ನು ಇತರೆ ವಿಷಯಗಳ ಪಿ.ಯು.ಸಿ ಪರೀಕ್ಷೆಗೆ ತತ್ಸಮಾನ ಎಂದು ಪರಿಗಣಿಸಲಾಗಿದೆ.

***IV ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ಕನ್ನಡ ಮಾಧ್ಯಮದ ಶಾಲೆಗಳಲ್ಲಿ [ಹಿಂದಿ ಭಾಷೆ] ಹುದ್ದೆಗಳಿಗೆ:***

***01.*** ಪಿ.ಯು.ಸಿ ಮತ್ತು ಟಿ.ಸಿ.ಹೆಚ್ / ಡಿ.ಇಡಿ., ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.

- ಆದರೆ, 1988ಕ್ಕಿಂತ ಮೊದಲು ಟಿ.ಸಿ.ಹೆಚ್ ಕೋರ್ಸಿಗೆ ಪ್ರವೇಶ ಪಡೆದ ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ ಮತ್ತು ಟಿ.ಸಿ.ಹೆಚ್ / ಪಿ.ಯು.ಸಿ ಇಂಟರ್ನ್‌ಶಿಪ್ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದಲ್ಲಿ ಅರ್ಹತೆ ಪಡೆಯುತ್ತಾರೆ.

***02.*** ಎಸ್.ಎಸ್.ಎಲ್.ಸಿ ಅಥವ ಪಿ.ಯು.ಸಿ.ಯಲ್ಲಿ ಹಿಂದಿಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಕಡ್ಡಾಯವಾಗಿ ಅಭ್ಯಾಸ ಮಾಡಿರಬೇಕು.

***ಅಥವಾ***

- ಕೆಳಕಂಡ ಯಾವುದಾದರೊಂದು ಪರೀಕ್ಷೆ ಅಥವಾ ರಾಜ್ಯ ಸರ್ಕಾರದಿಂದ ತತ್ಸಮಾನವೆಂದು ಅನುಮೋದಿತವಾದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.

*ಅ.* ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ ಚಾಮರಾಜಪೇಟೆ ಸಂಸ್ಥೆಯ ***ಹಿಂದಿ ಭಾಷಾ ಭೂಷಣ.***

*ಆ.* ಮೈಸೂರು ಹಿಂದಿ ಪ್ರಚಾರ ಪರಿಷತ್ ಸಂಸ್ಥೆಯ ***ಹಿಂದಿ ಉತ್ತಮ.***

ಇ. ಕರ್ನಾಟಕ ಹಿಂದಿ ಪ್ರಚಾರ ಸಮಿತಿ ಜಯನಗರ ಸಂಸ್ಥೆಯ ***ರಾಜಭಾಷಾ ಪ್ರಕಾಶ.***

***ಈ.*** ದಕ್ಷಿಣ ಹಿಂದಿ ಪ್ರಚಾರ ಸಭಾ ಮದರಸು ಸಂಸ್ಥೆಯ ***ರಾಷ್ಟ್ರಭಾಷಾ ವಿಶಾರದ.***

***ಮತ್ತು***

***03.*** ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ ಅಥವಾ ಟಿ.ಸಿ.ಹೆಚ್ ಪರೀಕ್ಷೆಯನ್ನು ಕನ್ನಡ ಮಾಧ್ಯಮದಲ್ಲಿ ಅಥವಾ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು.

***ಅಥವಾ***

ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

***C&R Rules ನಲ್ಲಿ "Note: Primary School Assistant Masters / Misters [Science], [English], [Hindi], in primary, Higher Primary and Model Higher Primary School shall form port of the General cadre and they shall teach other subjects also in addition to science / English / Hindi to make up the normal work load for the teacher"*** ಎಂದಿರುತ್ತದೆ.

ಆದ್ದರಿಂದ ಪ್ರಾಥಮಿಕ, ಹಿರಿಯ ಹಾಗೂ ಮಾದರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ವಿಜ್ಞಾನ / ಆಂಗ್ಲ / ಹಿಂದಿ ಪ್ರಾಥಮಿಕ ಶಾಲಾ ಸಹಶಿಕ್ಷಕರು ಸಾಮಾನ್ಯ ಶಿಕ್ಷಕರ ಹುದ್ದೆಯ ಭಾಗವಾಗಿರುತ್ತಾರೆ. ಈ ಶಿಕ್ಷಕರು ಕಾರ್ಯಭಾರ ಹೊಂದಾಣಿಕೆಗೆ ವಿಜ್ಞಾನ / ಆಂಗ್ಲ / ಹಿಂದಿ ವಿಷಯಗಳೊಂದಿಗೆ ಇತರೆ ವಿಷಯಗಳನ್ನು ಸಹಾ ಸಂಬಂಧಿಸಿದ ಶಾಲಾ ಮಾಧ್ಯಮಗಳಲ್ಲಿ ಬೋಧಿಸತಕ್ಕದ್ದು.

***ಸೂಚನೆ:*** ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆ ಪಡೆಯಲು ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಹರಾಗುವುದಿಲ್ಲ. ನಿಗದಿ ಪಡಿಸಿದ ಕೊನೆಯ ದಿನಾಂಕದಂದು ವಿದ್ಯಾರ್ಹತೆಯ ಅಂಕಪಟ್ಟಿ ಹಾಗೂ ಇತರೆ ಸರ್ಟಿಫಿಕೇಟ್‌ಗಳನ್ನು ಪಡೆದಿರಬೇಕು.

***08] ವಯೋಮಿತಿ:***

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

*[ಅ]* ಕನಿಷ್ಠ 18ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

*[ಆ]* ಗರಿಷ್ಠ ವಯೋಮಿತಿ:

| | |
|---|---|
| ಸಾಮಾನ್ಯ ವರ್ಗ | 40 ವರ್ಷ |
| 2ಎ, 2ಬಿ, 3ಎ, 3ಬಿ | 43 ವರ್ಷ |
| ಪ.ಜಾ/ಪ.ಪಂ/ಪ್ರವರ್ಗ–1 | 45 ವರ್ಷ |

***ಸೂಚನೆ:*** ಗೌರವ ಶಿಕ್ಷಕರಿಗೆ ಗರಿಷ್ಠ ವಯೋಮಿತಿ ಅನ್ವಯಿಸುವುದಿಲ್ಲ.

***ಟಿಪ್ಪಣಿ: ಗೌರವ ಶಿಕ್ಷಕರೆಂದರೆ:***

ಜಿಲ್ಲಾ ಪಂಚಾಯತ್ / ಮಂಡಲ ಪಂಚಾಯತ್ ವತಿಯಿಂದ ನೇಮಕಾತಿ ಹೊಂದಿ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಕಾರ್ಯ ನಿರ್ವಹಿಸಿರಬೇಕು / ನಿರ್ವಹಿಸುತ್ತಿರಬೇಕು. ಹಾಗೂ ಗೌರವಧನವನ್ನು ಜಿಲ್ಲಾ ಪಂಚಾಯತ್ / ಮಂಡಲ ಪಂಚಾಯತ್ ವತಿಯಿಂದ ಪಡೆದಿರಬೇಕು / ಪಡೆಯುತ್ತಿರಬೇಕು. ಖಾಸಗಿ ಶಾಲೆಗಳಲ್ಲಿ ಮತ್ತು ಇತರ ಇಲಾಖೆಗಳಲ್ಲಿ ಗೌರವ ಶಿಕ್ಷಕರಾಗಿ ಕಾರ್ಯ ನಿರ್ವಹಿಸಿರುವವರು ಕೃಪಾಂಕ ಪಡೆಯಲು ಅರ್ಹರಿರುವುದಿಲ್ಲ.

***09] ಅಭ್ಯರ್ಥಿಗಳ ಆಯ್ಕೆಗಾಗಿ ಮೆರಿಟ್ ನಿರ್ಧರಿಸುವ ವಿಧಾನ:***

- ಅಭ್ಯರ್ಥಿಯು ಎಸ್.ಎಸ್.ಎಲ್.ಸಿ / ದ್ವಿತೀಯ ಪಿ.ಯು.ಸಿ.ಯಲ್ಲಿ ಗಳಿಸಿದ ಅಂಕಗಳ ಶೇಕಡಾವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಪ್ರಥಮ ಮತ್ತು ದ್ವಿತೀಯ ಟಿ.ಸಿ.ಹೆಚ್ / ಡಿ.ಇಡಿ.,ಗಳ ಬಾಹ್ಯ ಅಂಕಗಳು / ಪಿ.ಯು.ಸಿ ಎಜುಕೇಷನ್ ಪರೀಕ್ಷೆಗಳಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು. (ಬೋರ್ಡ್ ಪರೀಕ್ಷೆಯ ಅಂಕಗಳು ಮಾತ್ರ).
- ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾ ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಎಸ್.ಎಸ್.ಎಲ್.ಸಿ / ದ್ವಿತೀಯ ಪಿ.ಯು.ಸಿ ಶೇಕಡಾ ಅಂಕ + ಎರಡು ವರ್ಷಗಳ ಟಿ.ಸಿ.ಹೆಚ್ / ಡಿ.ಇಡಿ., ಬಾಹ್ಯ ಅಂಕಗಳ ಶೇಕಡಾ ಅಂಕ / ಪಿ.ಯು.ಸಿ ಎಜುಕೇಷನ್‌ನ ದ್ವಿತೀಯ ಪರೀಕ್ಷೆಯ ಶೇಕಡಾ ಅಂಕ + ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಶೇಕಡಾ ಅಂಕಗಳು ಇವುಗಳ ಸರಾಸರಿ ಶೇಕಡಾ ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಅಭ್ಯರ್ಥಿಯು ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ ಸರ್ಕಾರಿ ಸೇವೆ ಸಲ್ಲಿಸಿದ್ದಲ್ಲಿ / ಸಲ್ಲಿಸುತ್ತಿದ್ದಲ್ಲಿ ಇವರಿಗೆ ಪೂರ್ಣಗೊಂಡ ಪ್ರತಿ ವರ್ಷದ ಸೇವಾ ಅವಧಿಗೆ 3 ಕೃಪಾಂಕಗಳಂತೆ ಗರಿಷ್ಠ 15 ಕೃಪಾಂಕಗಳ ಮಿತಿಗೆ ಒಳಪಟ್ಟ ಕೃಪಾಂಕಗಳನ್ನು ನೀಡಲಾಗುವುದು.
- ಗೌರವ ಶಿಕ್ಷಕರು / ಅರೆಕಾಲಿಕ ಶಿಕ್ಷಕರಾಗಿದ್ದಲ್ಲಿ ಸಂಬಂಧಿಸಿದ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರ ಸಲ್ಲಿಸಬೇಕು.
- ಸರಾಸರಿ ಶೇಕಡಾವಾರು ಅಂಕಕ್ಕೆ ಅಭ್ಯರ್ಥಿಯ ಕೃಪಾಂಕಗಳನ್ನು ಸೇರಿಸಲಾಗುವುದು. [ಕೃಪಾಂಕಕ್ಕೆ ಅಭ್ಯರ್ಥಿಯು ಅರ್ಹರಿದ್ದಲ್ಲಿ ಮಾತ್ರ] ಈ ಒಟ್ಟು ಅಂಕಗಳನ್ನು ಅರ್ಹತಾ ಅಂಕವೆಂದು ಪರಿಗಣಿಸಲಾಗುತ್ತದೆ.

***ಸೂಚನೆ:***

ಸರ್ಕಾರದ ಅನುಮೋದನೆಯಂತೆ ಆಯುಕ್ತರ ಅಧಿಕೃತ ಜ್ಞಾಪನ ಸಂಖ್ಯೆ:ಸಿ3[1]ಪ್ರಾಶಿ:ನೇ:20[ಎ]:ಭಾಗ–3: 2005–06, ದಿನಾಂಕ:03.11.2006ರ ಪ್ರಕಾರ ಟಿ.ಸಿ.ಹೆಚ್., ಮತ್ತು ಡಿ.ಇಡಿ., ಪರೀಕ್ಷೆಗಳ ಅಂತರಿಕ ಮೌಲ್ಯಮಾಪನಾ ಅಂಕಗಳನ್ನು ಹೊರತುಪಡಿಸಿ ಕೇವಲ ಬಾಹ್ಯ ಅಂಕಗಳನ್ನು ಮಾತ್ರ ಆಯ್ಕೆಗೆ ಪರಿಗಣಿಸಲಾಗುವುದು.

****** ಅರ್ಜಿ ಭರ್ತಿಮಾಡಲು ಕೊಟ್ಟಿರುವ ಸೂಚನೆಗಳನ್ನು ಗಮನಿಸುವುದು.***

***10] ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು:***

*[ಅ]*

| | | | |
|---|---|---|---|
| ***01.*** | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | : | ನಮೂನೆ–ಡಿ [ನಿಯಮ–3.ಎ(2)(3)], ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:132:ಎಸ್‌ಎಡಿ:1997, ನಾಂಕ:08.02.2000 |
| ***02.*** | ಹಿಂದುಳಿದ ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳು. | : | ನಮೂನೆ–ಇ [ನಿಯಮ–3.ಎ(2)(3)], ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:132:ಎಸ್‌ಎಡಿ:1997, ನಾಂಕ:08.02.2000 |
| ***03.*** | ಹಿಂದುಳಿದ ಪ್ರವರ್ಗ–2.ಎ, 2.ಬಿ, 3.ಎ ಮತ್ತು 3.ಬಿ ಈ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು. | : | ನಮೂನೆ–ಎಫ್ [ನಿಯಮ–3.ಎ(2)(3)] ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:126:ಎಸ್‌ಎಡಿ:1997, ನಾಂಕ:13.02.2003 |

ಅಭ್ಯರ್ಥಿಗಳು ಮೇಲೆ ನಿಗದಿಪಡಿಸಿರುವ ನಿಗದಿತ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರವಿರಬೇಕು ಮತ್ತು ಅವಧಿ ಮೀರಿದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

*[ಆ]* ಮೇಲೆ ವಿವರಿಸಿರುವ ಪ್ರಕಾರ ಸಾಮಾನ್ಯ ಅರ್ಹತೆ ಸೇರಿದಂತೆ ಪ್ರತಿ ಮೀಸಲಾತಿ ಪ್ರವರ್ಗಗಳಿಗೆ ಈ ಕೆಳಕಂಡ ಆದೇಶಗಳ ಪ್ರಕಾರ "ಸಮತಳ ಮೀಸಲಾತಿ" [Horizontal reservation] ಅನ್ವಯ ಹುದ್ದೆಗಳನ್ನು ವರ್ಗೀಕರಿಸಲಾಗಿದೆ.

| | | | |
|---|---|---|---|
| ***01.*** | ಮಾಜಿ ಸೈನಿಕರಿಗೆ | ಶೇಕಡಾ–10 | ಕರ್ನಾಟಕ ಸಿವಿಲ್ ಸರ್ವಿಸಸ್ [ಜನರಲ್ ರೆಕ್ರೂಟ್‌ಮೆಂಟ್] ರೂಲ್ಸ್ 1977ರ ನಿಯಮ–9[1]ರನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| ***02.*** | ಅಂಗವಿಕಲರಿಗೆ | ಶೇಕಡಾ–5 | ಕರ್ನಾಟಕ ಸಿವಿಲ್ ಸರ್ವಿಸಸ್ [ಜನರಲ್ ರೆಕ್ರೂಟ್‌ಮೆಂಟ್] ರೂಲ್ಸ್ 1977ರ ನಿಯಮ–9[1][ಎ]ರನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |

| | | | |
|---|---|---|---|
| ***03.*** | ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದವರ ಅಭ್ಯರ್ಥಿಗಳಿಗಾಗಿ | ಶೇಕಡಾ–5 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:23:ಎಸ್‌ಆರ್‌ಆರ್:1999 ದಿನಾಂಕ:23.11.2000 ಮತ್ತು ಸಂಖ್ಯದ:ಸಿಆಸುಇ:97:ಸೇನಿನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| ***04.*** | ಗ್ರಾಮೀಣ ಅಭ್ಯರ್ಥಿಗಳಿಗೆ | ಶೇಕಡಾ–25 | 2000ದ ಕರ್ನಾಟಕ ಗ್ರಾಮೀಣ ಅಭ್ಯರ್ಥಿಗಳಿಗಾಗಿ [ರಾಜ್ಯ ಸಿವಿಲ್ ಸೇವೆಗಳಲ್ಲಿ ನೇಮಕಾತಿ ಅಥವಾ ಹುದ್ದೆಗಳ ಮೀಸಲಾತಿ ವಿಧೇಯಕ] ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನಿನಿ:2002 ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| ***05.*** | ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗಾಗಿ | ಶೇಕಡಾ–5 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:71:ಎಸ್‌ಆರ್‌ಆರ್:2001 ದಿ:24.10.2002 ಮತ್ತು ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| ***06.*** | ಮಹಿಳಾ ಅಭ್ಯರ್ಥಿಗಳಿಗೆ | ಶೇಕಡಾ–50 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:41:ಎಸ್‌ಆರ್‌ಇ:2001, ದಿನಾಂಕ:09.08.2001ರ ಪ್ರಕಾರ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರಲಾಗಿದ್ದು, ಮಹಿಳೆಯರಿಗೆ ಪ್ರತಿ ಗುಂಪಿನಲ್ಲೂ ಶೇಕಡಾ 50% ಹುದ್ದೆಗಳನ್ನು ಮೀಸಲಿಸಲಾಗಿದೆ. ಮತ್ತು ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿನಾಂಕ:01.04.2008. |

***11] ಮಾಜಿ ಸೈನಿಕ ಅಭ್ಯರ್ಥಿಗಳು:***

"ಮಾಜಿ ಸೈನಿಕ"ರಿಗಾಗಿ ಮೀಸಲಿಟ್ಟ ಖಾಲಿ ಹುದ್ದೆಗಳನ್ನು ಮಿಲಿಟರಿ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿಗಳಿಂದ ಮತ್ತು ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರಿಂದ ನೇಮಕಾತಿ ಮೂಲಕ ತುಂಬಲಾಗುತ್ತದೆ.

***ಮಾಜಿ ಸೈನಿಕರ ಗುಂಪಿನಲ್ಲಿ ಕೆಳಕಂಡವರು ಆಯ್ಕೆಗೆ ಅರ್ಹರು:***

***01. ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ [ಯೋಧ ಅಥವಾ ಅಯೋಧನಾಗಿ] ಸೇವೆ ಸಲ್ಲಿಸಿದ ವ್ಯಕ್ತಿ. ಅಂದರೆ:***

*[ಅ]* ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ವ್ಯಕ್ತಿ.

***ಅಥವಾ***

*[ಆ]* ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ಅನರ್ಹನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಿಂದ ಬಿಡುಗಡೆಯಾದ ವ್ಯಕ್ತಿ.

***ಅಥವಾ***

*[ಇ]* ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

***ಅಥವಾ***

*[ಈ]* ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ಧಿಷ್ಠ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ.

***02. ಮಾಜಿ ಸೈನಿಕ ಅವಲಂಬಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅಂದರೆ:***

ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು. [ಸಂಬಂಧಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು, ಮಾಜಿ ಸೈನಿಕರ ಅವಲಂಬಿತರಡಿಯಲ್ಲಿ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ, ಅಂತಹವರಿಗೆ ವಯೋಮಿತಿ ಸಡಿಲಿಕೆ ಇಲ್ಲ]

***03. ಮಾಜಿ ಸೈನಿಕ ಗುಂಪಿನಲ್ಲಿ ಆಯ್ಕೆ ಹೊಂದಲು ಈ ಕೆಳಕಂಡವರು ಅರ್ಹರಲ್ಲ:***

[ಅ] ಈ ಸೌಲಭ್ಯಕ್ಕೆ ಡಿಫೆನ್ಸ್ ಸೆಕ್ಯುರಿಟಿ ಕೋರ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಕೋರ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಅರ್ಹರಲ್ಲ.

[ಆ] ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

***ಸೂಚನೆ:***

*"ಮಾಜಿ ಸೈನಿಕ" "ಸಶಸ್ತ್ರ ದಳದ ಸದಸ್ಯ" ಮತ್ತು "ಕುಟುಂಬದ ಸದಸ್ಯ"* ಎಂಬ ಪದಗಳ ಅರ್ಥವು ಕಾಲದಿಂದ ಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ [ಸಾಮಾನ್ಯ ನೇಮಕಾತಿ] ನಿಯಮಗಳು–1977ರಲ್ಲಿ ವಿವರಿಸಿರುವಂತೆ ಇರುತ್ತದೆ.

***12] ಅಂಗವಿಕಲ ಅಭ್ಯರ್ಥಿಗಳು:***

ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಎಂಎಂಡಬ್ಲ್ಯೂ:107:ಪಿಹೆಚ್‌ಪಿ:2003, ದಿ:11.07.2003 ಮತ್ತು ಸಂಖ್ಯೆ:ಡಿಪಿಎಆರ್:50:ಎಸ್‌ಆರ್‌ಆರ್:2000 ದಿ:30.09.2005ರ ಅನ್ವಯ ತಾನು "ಅಂಗವಿಕಲರ ಗುಂಪಿಗೆ ಸೇರಿದವರೆಂದು ಹೇಳಿಕೊಳ್ಳುವ ಅಭ್ಯರ್ಥಿಯು" ವೈದ್ಯಕೀಯ ಪ್ರಮಾಣ ಪತ್ರವನ್ನು ಹೊಂದಿರಬೇಕು. ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್:ಸಿಆಸು:50:ಎಸ್‌ಆರ್‌ಆರ್:2007, ದಿ:26.07.2011ರಲ್ಲಿ ನಿಗದಿಪಡಿಸಿರುವ ಅಂಗವಿಕಲ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗುವುದು. ಸರ್ಕಾರಿ ಆದೇಶ ಸಂಖ್ಯೆ:ಎಂ.ಎ.ಇ:107:ಪಿಹೆಚ್‌ಪಿ:2003 ದಿ:11.07.2003ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಕ್ಷಮ ಜಿಲ್ಲಾ ವೈದ್ಯಕೀಯ ಮಂಡಳಿಯಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:50:ಎಸ್‌ಆರ್‌ಆರ್:2007, ದಿ:26.07.2011ರಲ್ಲಿ ರಾಜ್ಯ ಸರ್ಕಾರವು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿದೆ. ಸದರಿ ಅಧಿಸೂಚನೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅಂಗವಿಕಲ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳ ಉದ್ಧೃತ ಭಾಗವನ್ನು ಈ ಕೆಳಗೆ ನೀಡಲಾಗಿದೆ.

| Blind | Low Vision | Leprosy Cured | Hearing Impaired | Locomotors Disability | Mentally ill | Mentally Retarded |
|---|---|---|---|---|---|---|
| Primary School Music Teacher,<br><br>Secondary School Assistant Grade-II, Assistant Masters [Arts] [Languages] Special Teacher Grade-II, Drama Teachers, Dance Teachers, Music Teachers.<br><br>FDA., SDA., | Primary School Music Teacher, Asst.Masters [General] [English] [Hindi]<br><br>Secondary School Assistant Grade-II, Assistant Masters [Arts] [Languages] Special Teacher Grade-II, Drama Teachers, Dance Teachers, Music Teachers.<br><br>FDA., SDA., Group D, Posts, Peon. | Primary School Assistant Masters [General] [Science] [English] [Hindi] Drawing Teacher<br><br>Secondary School Assistant Grade-II, Assistant Masters [Arts] [Physical Science] [Biological Science] [Languages]<br><br>Special Teacher Grade-II, Drawing Teachers, Drama Teachers, Dance Teachers, Craft Teachers, Music Teachers.<br><br>FDA., SDA., Typist, Steno & Group D., | Primary School Music Teacher, Asst.Masters [General] [English] [Hindi] Drawing Teachers.<br><br>Secondary School Assistant Grade-II, Assistant Masters [Languages] Physical Education Teacher, Grade-II, Drawing Teachers, Drama Teachers, Dance Teachers, Craft Teachers.<br><br>FDA., SDA., Typist, & Group D., | Primary School Assistant Masters [General] [Science] [English] [Hindi] Drawing Teacher<br><br>Secondary School Assistant Grade-II, Assistant Masters [Arts] [Physical Science] [Biological Science] [Languages]<br><br>Special Teacher Grade-II, Drawing Teachers, Drama Teachers, Dance Teachers, Craft Teachers, Music Teachers.<br><br>FDA., SDA., Typist, Steno & Group D Posts. | FDA., SDA., & Group D Posts. | - |

- ದೈಹಿಕ ಅಂಗವಿಕಲ ಅಭ್ಯರ್ಥಿಗಳು ಸರ್ಕಾರಿ ಜಿಲ್ಲಾ ಆಸ್ಪತ್ರೆಗಳಲ್ಲಿರುವ ಮೂಳೆ ತಜ್ಞ [Orthopaedic Surgeon] ರಿಂದ ದೈಹಿಕ ಅಂಗವಿಕಲತೆಯ ಮೌಲೀಕರಣವನ್ನು Alimco Kanpur [W.H.O Standard] ಇದರ ಆಧಾರದ ಮೇಲೆ ಮಾಡಿಸುವುದು ಕಡ್ಡಾಯವಾಗಿರುತ್ತದೆ. ಹಾಗೂ ಶ್ರವಣ ದೋಷ ಹೊಂದಿರುವ ಅಂಗವಿಕಲ ಅಭ್ಯರ್ಥಿಗಳ ಪ್ರಮಾಣ ಪತ್ರದಲ್ಲಿ ಶ್ರವಣ ದೋಷದ ಪ್ರಮಾಣವನ್ನು ಡೆಸಿಬಲ್ಸ್ [Decibels] ಗಳಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು.

***13] ಗ್ರಾಮೀಣ ಅಭ್ಯರ್ಥಿಗಳು:***

ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರ ನಿಯಮಗಳ ಅಧಿನಿಯಮ–1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964ರಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶ ಹೊರತಾಗಿ ಇತರೆ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಅಭ್ಯರ್ಥಿ.

ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸಂಬಂಧಿಸಿದ ಪ್ರಮಾಣ ಪತ್ರಗಳನ್ನು ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್:96:ಸೇನೆನಿ:2005, ದಿನಾಂಕ:10.08.2005ರಲ್ಲಿ ನೀಡಿರುವ ನಿಗದಿತ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು.

- ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–1ರಲ್ಲಿ ಅಂದರೆ, ಮೇಲುಸ್ಥರದಲ್ಲಿ [creamy layer] ಬರುವುದಿಲ್ಲವೆಂದು ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದ ಪ್ರಮಾಣ ಪತ್ರದ ಜೊತೆಗೆ ಸರ್ಕಾರದ ಆದೇಶ ದಿನಾಂಕ:10.08.2005ರಲ್ಲಿ ನಿಗದಿಪಡಿಸಲಾದ ನಮೂನೆ–2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
- ಪ್ರವರ್ಗ–1, 2.ಎ., 2.ಬಿ., 3.ಎ., 3.ಬಿ., ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಸರ್ಕಾರದ ಆದೇಶ ದಿನಾಂಕ:10.08.2005ರಲ್ಲಿ ನಿಗದಿ ಪಡಿಸಲಾದ ನಮೂನೆ–2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಪಡೆದಿರಬೇಕು.

***14] ಯೋಜನಾ ನಿರಾಶ್ರಿತ ಕುಟುಂಬದ ಅಭ್ಯರ್ಥಿಗಳು:***

ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:23:ಎಸ್ಆರ್ಆರ್:1999, ದಿನಾಂಕ:23.11.2000ರನ್ವಯ ಯೋಜನಾ ನಿರಾಶ್ರಿತ ಕುಟುಂಬದ ಅಭ್ಯರ್ಥಿ ಮೀಸಲಾತಿ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ:ಸಿಆಸುಇ:44:ಸೇನೇನಿ, ದಿನಾಂಕ:27.07.2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ [ತಹಸೀಲ್ದಾರ್] ಅರ್ಜಿ ಸಲ್ಲಿಸುವ ಕೊನೆ ದಿನಾಂದೊಳಗೆ ಪಡೆದಿರಬೇಕು.

***ಯೋಜನೆ ಅಂದರೆ:***

ನಿರಾಶ್ರಿತ ವ್ಯಕ್ತಿಗಳಿಂದ ಪಡೆಯಲಾದ ಜಮೀನನ್ನು ನಿರ್ಮಾಣ ಅಥವಾ ನೀರಾವರಿಯ ಉದ್ದೇಶಕ್ಕಾಗಿ ಅಥವಾ ನೀರು ಸರಬರಾಜು ಮಾಡುವ ಅಭಿವೃದ್ಧಿ ಕಾರ್ಯದ ವಿಸ್ತರಣೆ ಅಥವಾ ವಿದ್ಯುಚ್ಛಕ್ತಿ ಉತ್ಪಾದನೆ ಮತ್ತು ಪೂರೈಕೆ ಅಥವಾ ವಿದ್ಯುಚ್ಛಕ್ತಿ ಕಾರ್ಯಗಳ ಅನುಕೂಲಕರ ಅಭಿವೃದ್ಧಿಯೂ ಸೇರಿದಂತೆ ಸಾರ್ವಜನಿಕ ಉಪಯೋಗಗಳಿಗಾಗಿ ನಿರ್ಮಾಣ ಸುಧಾರಣೆ ಅಥವಾ ಅಭಿವೃದ್ಧಿ ಕಾರ್ಯಗಳ ಯೋಜನೆ.

***ವಿಶೇಷ ಸೂಚನೆ:***

ಈ ಮೇಲ್ಕಂಡ ನಿಯಮಗಳು ಪ್ರಾರಂಭವಾಗುವುದಕ್ಕಿಂತ 20 ವರ್ಷಗಳ ಮುಂಚಿತವಾಗಿ ಯಾವುದೇ ಗ್ರಾಮೀಣದಲ್ಲಿನ ಅಥವಾ ಪ್ಲಾಟ್ ಅಥವಾ ಇನ್ನಿತರ ಯಾವುದೇ ಆಸ್ತಿಗಳನ್ನು ಹೊಂದಿದ್ದು, ಅಂತಹ ಆಸ್ತಿಗಳನ್ನು ಯೋಜನೆಗಳ ಉದ್ದೇಶಕ್ಕಾಗಿ ಉಪಯೋಗಿಸಿಕೊಂಡಿದ್ದಲ್ಲಿ, ಅಂತಹ ಜಮೀನುಗಳನ್ನು ಸ್ವಾಧೀನಪಡಿಸಿಕೊಂಡ ಕಾರಣದಿಂದಾಗಿ ನಿರಾಶ್ರಿತರಾದ ಕುಟುಂಬದ ಸದಸ್ಯರು / ವ್ಯಕ್ತಿಗಳು ಈ ನಿಯಮಗಳಿಗೆ ಸೌಲಭ್ಯ ಪಡೆಯಲು ಅರ್ಹರಿರುವುದಿಲ್ಲ.

ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ:ಸಿಆಸುಇ:44: ಸೇನೇನಿ ದಿನಾಂಕ:27.07.2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

***15] ಕನ್ನಡ ಮಾಧ್ಯಮದ ಅಭ್ಯರ್ಥಿಗಳು:***

1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳೂ ಈ ಮೀಸಲಾತಿಗೆ ಅರ್ಹರಾಗುತ್ತಾರೆ. [1ನೇ ತರಗತಿಗೆ ದಾಖಲಾಗದೇ ನೇರವಾಗಿ ನಂತರದ ಹೆಚ್ಚಿನ ತರಗತಿಗೆ ದಾಖಲಾಗಿ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ್ದಲ್ಲಿ ಸಹ ಈ ಸೌಲಭ್ಯಕ್ಕೆ ಅರ್ಹರಾಗುವರು] ಈ ಅಭ್ಯರ್ಥಿಗಳು ಸಂಬಂಧಿಸಿದ ಮುಖ್ಯೋಪಾಧ್ಯಾಯರಿಂದ ದೃಢೀಕೃತ ಪ್ರಮಾಣ ಪತ್ರಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳವರ ಮೇಲುಸಹಿಯೊಂದಿಗೆ ಸಲ್ಲಿಸತಕ್ಕದ್ದು. ಪ್ರಮಾಣ ಪತ್ರಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳವರ ಮೇಲು ಸಹಿಯೊಂದಿಗೆ ಸಲ್ಲಿಸತಕ್ಕದ್ದು. ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು.

***16] ಗೌರವ ಶಿಕ್ಷಕರ ಪ್ರಮಾಣ ಪತ್ರ:***

ಸರ್ಕಾರಿ ಶಾಲೆಗಳಲ್ಲಿ ಗೌರವ ಶಿಕ್ಷಕರಾಗಿ ಸಲ್ಲಿಸಿದ ಸೇವಾ ಅವಧಿಗೆ ಕೃಪಾಂಕ ಪಡೆಯಲಿಚ್ಚಿಸುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಸಂಬಂಧಿಸಿದ ಶಾಲೆಯ ಮುಖ್ಯಸ್ಥರಿಂದ ಪ್ರಮಾಣ ಪತ್ರವನ್ನು ಪಡೆದು, ಆಯಾ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಇವರಿಂದ ದೃಢೀಕರಿಸಿಕೊಂಡಿರಬೇಕು. ಸದರಿ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು.

***17] ಅಭ್ಯರ್ಥಿಗಳ ಮಾಹಿತಿ ಸಂಬಂಧ ಆಕ್ಷೇಪಣೆ ಸ್ವೀಕರಿಸಿ ದಾಖಲಿಸುವುದು:***

ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳು, ಅರ್ಹತಾದಾಯಕ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳು ಹಾಗೂ ಅಭ್ಯರ್ಥಿಯು ಅರ್ಜಿಯಲ್ಲಿ ಕ್ಲೇಮು ಮಾಡಿರುವ ಮೀಸಲಾತಿ ವಿವರಗಳನ್ನು ಒಳಗೊಂಡ ಪೂರ್ಣ ಮಾಹಿತಿಯನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ಎಲ್ಲಾ ಅಭ್ಯರ್ಥಿಗಳ ವಿವರಗಳನ್ನು ಅಂದರೆ, ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳು, ಅರ್ಹತಾದಾಯಕ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳು ಹಾಗೂ ಆನ್‌ಲೈನ್ ಅರ್ಜಿಯಲ್ಲಿ ಕ್ಲೇಮು ಮಾಡಿರುವ ಮೀಸಲಾತಿ ವಿವರಗಳನ್ನು ಒಳಗೊಂಡ ಪೂರ್ಣ ಮಾಹಿತಿಯನ್ನು ಇಲಾಖಾ ವೆಬ್‌ಸೈಟ್ http://schooleducation.kar.nic.in ನಲ್ಲಿ ಪ್ರಕಟಿಸಿ, ನಿಗದಿತ ಸಮಯ ನೀಡಿ ಆಕ್ಷೇಪಣೆಗಳನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಗುವುದು. ಅಭ್ಯರ್ಥಿಯು ಆನ್‌ಲೈನ್ ಮೂಲಕ ಸಲ್ಲಿಸಿರುವ ಅರ್ಜಿಯಲ್ಲಿ ದಾಖಲಿಸಿದ ಶೈಕ್ಷಣಿಕ ಮಾಹಿತಿಯಲ್ಲಿ ವ್ಯತ್ಯಾಸವಾಗಿದ್ದಲ್ಲಿ ಮಾತ್ರ ನಿಗದಿತ ನಮೂನೆಯಲ್ಲಿ ಆಕ್ಷೇಪಣೆಗಳನ್ನು ಸಲ್ಲಿಸಬೇಕಾಗುತ್ತದೆ. ಆದರೆ, ಮೂಲ ಅರ್ಜಿಯಲ್ಲಿ ದಾಖಲಿಸದಿರುವ ಯಾವುದೇ ಮಾಹಿತಿಯನ್ನು ಪರಿಗಣಿಸಲಾಗುವುದಿಲ್ಲ. ಆಕ್ಷೇಪಣೆಗಳನ್ನು ನಿಯಮಾನುಸಾರ ಪರಿಶೀಲಿಸಿ, ಅಭ್ಯರ್ಥಿಗಳು ನೀಡಿದ ಶೈಕ್ಷಣಿಕ ದಾಖಲೆಗಳ ಆಧಾರದ ಮೇಲೆ ಪರಿಷ್ಕರಿಸಿ, ಪುನಃ ಇಲಾಖಾ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು.

***18] ಆಯ್ಕೆ ಪಟ್ಟಿ ತಯಾರಿಸುವ ವಿಧಾನ:***

ಆಯ್ಕೆ ಪಟ್ಟಿಯನ್ನು ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇಲೆ ತಯಾರಿಸಲಾಗುತ್ತದೆ. ಅರ್ಹತೆ ಮತ್ತು ಮೀಸಲಾತಿ ಬಗ್ಗೆ ವಿವರಗಳನ್ನು ಈಗಾಗಲೇ ನೀಡಿದೆ. ಆಯ್ಕೆ ಪಟ್ಟಿಯನ್ನು ಎರಡು ಹಂತಗಳಲ್ಲಿ ತಯಾರಿಸಲಾಗುತ್ತದೆ.

- ***ಮೊದಲ ಹಂತ:*** ತಾತ್ಕಾಲಿಕ ಆಯ್ಕೆಪಟ್ಟಿ ಪ್ರಕಟಣೆ ಹಾಗೂ ಆಕ್ಷೇಪಣೆಗಳ ಆಹ್ವಾನ.

- ***ಎರಡನೇ ಹಂತ:*** ಮೂಲ ಪ್ರಮಾಣ ಪತ್ರಗಳ ಪರಿಶೀಲನೆ ಮತ್ತು ಅಂತಿಮ ಆಯ್ಕೆ ಪಟ್ಟಿ ಪ್ರಕಟಣೆ.

***ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಣೆ ಹಾಗೂ ಆಕ್ಷೇಪಣೆಗಳ ಆಹ್ವಾನ:***

ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿ ಅಭ್ಯರ್ಥಿಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗುತ್ತದೆ. ಆಕ್ಷೇಪಣೆಗಳನ್ನು ಸಲ್ಲಿಸಲು ಅಂತಿಮ ದಿನಾಂಕವನ್ನು ನಿಗದಿಪಡಿಸಲಾಗುತ್ತದೆ. ಈ ಬಗ್ಗೆ ಸೂಚನೆಯನ್ನು ದಿನಪತ್ರಿಕೆಗಳಲ್ಲಿ ನೀಡಲಾಗುತ್ತದೆ. ಅಭ್ಯರ್ಥಿಗಳು ತಮ್ಮ ಆಕ್ಷೇಪಣೆಗಳನ್ನು ನಿಗಧಿತ ದಿನಾಂಕದೊಳಗೆ ತಪ್ಪದೇ ಸಲ್ಲಿಸಬೇಕು. ನಂತರ ನೀಡಿದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ ಹಾಗೂ ಈ ಬಗ್ಗೆ ಯಾವುದೇ ಸೂಚನೆ ನೀಡುವುದಿಲ್ಲ. ಇದೇ ರೀತಿ ಯಾವುದೇ ಅಭ್ಯರ್ಥಿ ಆಕ್ಷೇಪಣೆಗಳನ್ನು ಸಲ್ಲಿಸದಿದ್ದಲ್ಲಿ ಅಂತಿಮ ಆಯ್ಕೆ ಪಟ್ಟಿಯಲ್ಲಿ ಯಾವುದೇ ರೀತಿಯ ಪರಿಹಾರಕ್ಕೆ ಅರ್ಹತೆ ಪಡೆಯುವುದಿಲ್ಲ. ಹಾಗೂ ಅಂತಿಮ ಆಯ್ಕೆಪಟ್ಟಿಯ ಪ್ರಕಟಣೆಯ ನಂತರ ಮತ್ತೆ ಅವರ ಅರ್ಹತೆಯ ಪರಿಶೀಲನೆಗಾಗಲೀ ಅಥವಾ ಇನ್ನಾವುದೇ ಬಗೆಯ ಪರಿಹಾರಕ್ಕಾಗಲೀ ಅರ್ಹತೆ ಪಡೆಯುವುದಿಲ್ಲ.

***19] ಅಂತಿಮ ಆಯ್ಕೆ ಪಟ್ಟಿ ಪ್ರಕಟಣೆ:***

- ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿದಾಗ ಪ್ರತಿ ಅಭ್ಯರ್ಥಿ ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಲ್ಲಿಸಬೇಕೆಂದು ಪ್ರಕಟಣೆಯಲ್ಲಿ ತಿಳಿಸಲಾಗಿರುತ್ತದೆ. ಇದರಂತೆ ಅಭ್ಯರ್ಥಿಗಳು ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಅರ್ಜಿ ಸ್ವೀಕೃತಿ ಮತ್ತು ಗುರುತಿನ ಪತ್ರದ ಪ್ರತಿ ಸಹಿತ ಪರಿಶೀಲನೆಗೆ ಸಲ್ಲಿಸಬೇಕು. ***ಅಭ್ಯರ್ಥಿಗಳಿಗೆ ಈ ಬಗ್ಗೆ ವೈಯಕ್ತಿಕವಾಗಿ ಸೂಚನೆ ನೀಡಲಾಗುವುದಿಲ್ಲ.*** ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಸಲ್ಲಿಸದಿರುವ / ಕೌನ್ಸಿಲಿಂಗ್‌ಗೆ ಗೈರು ಹಾಜರಾಗುವ / ಅಪೂರ್ಣ ದಾಖಲೆಗಳನ್ನು ಸಲ್ಲಿಸುವ ಅಭ್ಯರ್ಥಿಗಳು ಅಂತಿಮ ಆಯ್ಕೆಪಟ್ಟಿಯಲ್ಲಿ ಅವಕಾಶವನ್ನು ಕಳೆದುಕೊಳ್ಳುತ್ತಾರೆ.
- ಜಿಲ್ಲಾ ಮಟ್ಟದ ಅಂತಿಮ ಆಯ್ಕೆಪಟ್ಟಿಯಿಂದ ಬ್ಲಾಕ್ ಮಟ್ಟದ ಆಯ್ಕೆಪಟ್ಟಿಯನ್ನು ಅಭ್ಯರ್ಥಿಗಳು ಅರ್ಜಿಯಲ್ಲಿ ಸೂಚಿಸಿರುವ ಬ್ಲಾಕ್‌ಗಳ ಆದ್ಯತೆಯ ಆಧಾರದ ಮೇಲೆ ತಯಾರಿಸಲಾಗುತ್ತದೆ. ಅಭ್ಯರ್ಥಿಗಳು ಅರ್ಜಿಯಲ್ಲಿ ಬ್ಲಾಕ್‌ಗಳ ಆದ್ಯತೆಯನ್ನು ಸರಿಯಾಗಿ ನಮೂದಿಸಬೇಕು.
- ಬ್ಲಾಕ್ ಮಟ್ಟದ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಪ್ರಾಧಿಕಾರಿಗಳಾದ ಕ್ಷೇತ್ರ ಶಿಕ್ಷಣಾಧಿಕಾರಿಗಳು ಕೌನ್ಸಿಲಿಂಗ್ ಮೂಲಕ ನೇಮಕಾತಿ ಆದೇಶ ನೀಡುತ್ತಾರೆ.

***20] ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ವಿವರಗಳು:***

***ಅ. ಪರೀಕ್ಷೆಯ ಹೆಸರು:*** ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿಯರ ಹುದ್ದೆಗಳ ನೇಮಕಾತಿಗೆ ನಡೆಸುವ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಪ್ರತಿಯೊಂದಿಗೆ ಅಭ್ಯರ್ಥಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾಗುವುದು ಕಡ್ಡಾಯವಾಗಿರುತ್ತದೆ.

***ಆ. ಪರೀಕ್ಷೆ ನಡೆಸುವ ಪ್ರಾಧಿಕಾರ:*** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯನ್ನು ಆಯ್ಕೆ ಪ್ರಾಧಿಕಾರ ಹಾಗೂ ಉಪನಿರ್ದೇಶಕರು [ಆಡಳಿತ], ಸಾರ್ವಜನಿಕ ಶಿಕ್ಷಣ ಇಲಾಖೆ, ಇವರು ತಮ್ಮ ಶೈಕ್ಷಣಿಕ ಜಿಲ್ಲೆಯ ವ್ಯಾಪ್ತಿಯಲ್ಲಿ ನಡೆಸುವರು.

ಇ. ಪರೀಕ್ಷೆ ನಡೆಸುವ ದಿನಾಂಕ:24.03.2013.

***ಈ. ಪರೀಕ್ಷಾ ಅವದಿ ಹಾಗೂ ಸಮಯ:*** ಬೆಳಿಗ್ಗೆ 10.30 ರಿಂದ ಮಧ್ಯಾಹ್ನ 12.00ಗಂಟೆ.

***ಉ. ಪ್ರಶ್ನೆ ಪತ್ರಿಕೆಯಲ್ಲಿನ ವಿಷಯ ಹಾಗೂ ಅಂಕಗಳು:*** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಕೆಳಕಂಡ ಐದು ವಿಷಯಗಳನ್ನೊಳಗೊಂಡ ಒಂದು ಪ್ರಶ್ನೆ ಪತ್ರಿಕೆಯನ್ನು ಹೊಂದಿರುವುದು. ಪ್ರತಿ ವಿಷಯದಲ್ಲಿ ಒಂದು ಅಂಕದ 30 ಪ್ರಶ್ನೆಗಳಿದ್ದು, ಐದು ವಿಷಯಗಳಿಗೆ ಒಟ್ಟು 150 ಅಂಕಗಳನ್ನು ನಿಗದಿಪಡಿಸಲಾಗಿದೆ. ಪ್ರಸ್ತುತ ನಡೆಯುತ್ತಿರುವ ಪರೀಕ್ಷೆ ಎನ್.ಸಿ.ಟಿ.ಇ., ನಿಗದಿ ಪಡಿಸಿರುವ ಶಿಕ್ಷಕರ ಅರ್ಹತಾ ಪರೀಕ್ಷೆ ಸ್ವರೂಪವನ್ನು ಅನುಸರಿಸಿ ನಡೆಸಲಾಗುವುದು.

***ವಿಷಯ ಮತ್ತು ನಿಗದಿಪಡಿಸಿರುವ ಗರಿಷ್ಠ ಅಂಕಗಳ ವಿಂಗಡಣೆ ಕೆಳಗಿನಂತಿದೆ.***

| ಕ್ರ.ಸಂ | ವಿಷಯ | ಅಂಕಗಳು |
|---|---|---|
| 01. | ಶಿಶು ಮನೋವಿಜ್ಞಾನ ಮತ್ತು ವಿಕಸನ. | 30 |
| 02. | ಬಾಷೆ: ಕನ್ನಡ / ಉರ್ದು/ಮರಾಠಿ / ತಮಿಳು / ತೆಲುಗು / ಮಲಯಾಳಂ | 30 |
| 03. | ಆಂಗ್ಲ ಭಾಷೆ | 30 |
| 04. | ಪರಿಸರ ಅಧ್ಯಯನ [ವಿಜ್ಞಾನ ಮತ್ತು ಸಮಾಜ ವಿಜ್ಞಾನ] | 30 |
| 05. | ಗಣಿತ | 30 |
| | ಒಟ್ಟು | **150** |

***21] ಪರೀಕ್ಷಾ ವಿಷಯಗಳಿಗೆ ನಿಗದಿಪಡಿಸಿರುವ ಪಠ್ಯವಸ್ತು: [ಎನ್.ಸಿ.ಟಿ.ಇ., ನಿಗಧಿಪಡಿಸಿರುವ ಪರೀಕ್ಷಾ ಪಠ್ಯ ಕ್ರಮದಂತೆ]***

***01.*** ಭಾಷೆ : ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು, ಮಲಯಾಳಂ.

***02.*** ಆಂಗ್ಲ ಭಾಷೆ, [4] ಪರಿಸರ ಅಧ್ಯಯನ [ವಿಜ್ಞಾನ ಮತ್ತು ಸಮಾಜ ವಿಜ್ಞಾನ] [5] ಗಣಿತ.

***03.*** ಪ್ರಶ್ನೆಗಳ ವ್ಯಾಪ್ತಿ ಹಾಗೂ ಸ್ವರೂಪ.

*ಅ.* ಪ್ರಶ್ನೆಗಳು ನಿಗದಿಪಡಿಸಲಾಗಿರುವ ಪಠ್ಯವಸ್ತುವಿನ ವ್ಯಾಪ್ತಿಯಲ್ಲಿ ಬರುತ್ತದೆ.

*ಆ.* ಪ್ರಶ್ನೆಗಳು ವಸ್ತುನಿಷ್ಠವಾಗಿದ್ದು ಪ್ರತಿ ಪ್ರಶ್ನೆಗೆ ಒಂದು ಅಂಕ ನಿಗದಿಪಡಿಸಿದೆ.

ಇ. ಪ್ರತಿ ಪ್ರಶ್ನೆ ನಾಲ್ಕು ಉತ್ತರಗಳನ್ನು ಹೊಂದಿದ್ದು, ಇವುಗಳಲ್ಲಿ ಒಂದು ಸರಿ ಉತ್ತರವಾಗಿರುತ್ತದೆ.

ಈ. ಉತ್ತರಗಳನ್ನು 'ಓ.ಎಂ.ಆರ್' ಶೀಟಿನಲ್ಲಿ ಗುರುತಿಸುವುದು.

ಉ. ಪ್ರಶ್ನೆ ಪತ್ರಿಕೆಗಳು ಪ್ರತಿ ಮಾಧ್ಯಮದ ಹುದ್ದೆಗಳಿಗೆ ಆಯಾ ಮಾಧ್ಯಮದ ಭಾಷೆಗಳಲ್ಲಿ ಇರುತ್ತದೆ.

***22] ಪ್ರಮುಖವಾದ ಸೂಚನೆಗಳು:***

***01.*** ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿಗಳನ್ನು ಸಲ್ಲಿಸಬೇಕು. ನಿಗದಿತ ನಮೂನೆಯಲ್ಲಿ ಸಲ್ಲಿಸದ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಮತ್ತು ಆಯ್ಕೆಗೆ ಪರಿಗಣಿಸುವುದಿಲ್ಲ. ಅಭ್ಯರ್ಥಿಗಳು ಪ್ರವೇಶ ಪತ್ರವನ್ನು ಆನ್‌ಲೈನ್ ಮೂಲಕವೇ ಪಡೆಯತಕ್ಕದ್ದು. ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಹಾಜರಾದ ಮಾತ್ರಕ್ಕೆ ಅಭ್ಯರ್ಥಿ ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಭ್ಯರ್ಥಿಯು ಇದರ ಜೊತೆಗೆ ಆಯಾ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿ ಹೊಂದಿರತಕ್ಕದ್ದು.

***02.*** ಅರ್ಜಿಗಳನ್ನು ದಿನಾಂಕ:02.03.2013ರ ಸಂಜೆ 5.30ರೊಳಗೆ ಆನ್‌ಲೈನ್ ಮೂಲಕವೇ ಸಲ್ಲಿಸಬೇಕು. ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ. ಅಂಚೆ ಮೂಲಕ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

***03.*** ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಸಮಯಕ್ಕೆ ***ಎಲ್ಲಾ ಪ್ರಮಾಣ ಪತ್ರಗಳನ್ನು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕದ ಮೊದಲೇ ಪಡೆದಿರಬೇಕು.*** ಆದರೆ, ತಾತ್ಕಾಲಿಕ ಆಯ್ಕೆಪಟ್ಟಿಯ ಪ್ರಕಟಣೆಯ ನಂತರ ಆಯ್ಕೆ ಹೊಂದಿದ್ದಲ್ಲಿ ಅಥವಾ ಆಕ್ಷೇಪಣೆ ನೀಡುವ ಹಂತದಲ್ಲಿ ಎಲ್ಲಾ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಆಯ್ಕೆ ಪ್ರಾಧಿಕಾರಕ್ಕೆ ಸಲ್ಲಿಸಬೇಕು.

***04.*** ಅಭ್ಯರ್ಥಿಗಳು ಪಾಸ್‌ಪೋರ್ಟ್ ಅಳತೆಯ ಇತ್ತೀಚಿನ ಭಾವಚಿತ್ರವನ್ನು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವ ಸಮಯದಲ್ಲಿ ಅರ್ಜಿ ನಮೂನೆಯಲ್ಲಿ ನಿಗದಿಪಡಿಸಿರುವ ಸ್ಥಳದಲ್ಲಿಯೇ ಸ್ಕ್ಯಾನ್ ಮಾಡಿ ಸಲ್ಲಿಸುವುದು.

***05.*** ಪ್ರಮಾಣ ಪತ್ರಗಳು ಪರಿಶೀಲನೆಯ ಸಮಯದಲ್ಲಿ ***ಸುಳ್ಳು ದಾಖಲೆ ಅಥವಾ ಸುಳ್ಳು ಮಾಹಿತಿ ನೀಡಿರುವುದು ಕಂಡುಬಂದಲ್ಲಿ ಅಂತಹ ಅಭ್ಯರ್ಥಿಗಳು ಆಯ್ಕೆಯಾಗುವ ಅವಕಾಶವನ್ನು ಕಳೆದುಕೊಳ್ಳುತ್ತಾರೆ.***

***06.*** ಆಯ್ಕೆಪಟ್ಟಿಯಲ್ಲಿ ಸೇರ್ಪಡೆಯಾದ ಮಾತ್ರಕ್ಕೆ ಅಭ್ಯರ್ಥಿಗಳ ನೇಮಕಾತಿಗೆ ಹಕ್ಕನ್ನು ಪಡೆದುಕೊಳ್ಳುವುದಿಲ್ಲ.

***07.*** ಮೇಲಿನ ನೇಮಕಾತಿಗಳು ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಆದೇಶಗಳು ಮತ್ತು ತಿದ್ದುಪಡಿಗೆ ಒಳಪಟ್ಟಿರುತ್ತದೆ.

***08.*** ಯಾವುದೇ ಹಂತದಲ್ಲಿ ತಪ್ಪು ಮಾಹಿತಿಯ ಆಧಾರದ ಮೇಲೆ ಆಯ್ಕೆಯಾದ ಅಥವಾ ಅನರ್ಹತೆಯ ಕಾರಣಗಳಿಗಾಗಿ ಅಭ್ಯರ್ಥಿಯ ಹೆಸರನ್ನು ಪಟ್ಟಿಯಿಂದ ಕೈಬಿಡುವ ಅಥವಾ ನೇಮಕಾತಿ ಆದೇಶವನ್ನು ರದ್ದುಗೊಳಿಸುವ ಅಧಿಕಾರವನ್ನು ಇಲಾಖೆಯು ಕಾಯ್ದಿರಿಸಿಕೊಂಡಿರುತ್ತದೆ.

***09.*** ಆಯ್ಕೆಯಾದ ಅಭ್ಯರ್ಥಿಯು ತಾನು ನೇಮಕಗೊಂಡ ಜೇಷ್ಠತಾ ಘಟಕ [ತಾಲ್ಲೂಕು]ದಲ್ಲಿ ಮಾತ್ರ ಸೇವೆ ಸಲ್ಲಿಸಬೇಕಾಗಿರುತ್ತದೆ.

***10.*** ಅಭ್ಯರ್ಥಿಗಳು ಅವರ ಅರ್ಜಿಗಳಲ್ಲಿ ಭರ್ತಿ ಮಾಡಿರುವ ಮಾಹಿತಿಗಳ ಆಧಾರದ ಮೇಲೆ ಅವರಿಗೆ ಸ್ಪರ್ಧಾತ್ಮಕ ಪರೀಕ್ಷೆ ಬರೆಯಲು ಪ್ರವೇಶ ಪತ್ರಗಳನ್ನು ನೀಡುತ್ತದೆ. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಅಂಕಗಳ ಮಾಹಿತಿ, ಮೀಸಲಾತಿ, ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಪೂರ್ಣ ಮಾಹಿತಿ ನೀಡದ ಅಥವಾ ತಪ್ಪು ಮಾಹಿತಿ ನೀಡಿದ ಸಂದರ್ಭಗಳಲ್ಲಿ ಮುಂದಿನ ಆಗುಹೋಗುಗಳಿಗೆ ಅಭ್ಯರ್ಥಿಗಳೇ ಜವಾಬ್ದಾರರು.

***11.*** ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಹಾಗೂ ವಯೋಮಿತಿ ಸಡಿಲಿಕೆ ಇತ್ಯಾದಿಗಳಿಗೆ ಸಂಬಂಧಿತ ವಿವರಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು. ಈ ಬಗ್ಗೆ ಅನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಮನವಿ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.

***12.*** ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

***13.*** ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವಾಗ ಪ್ರವೇಶ ಪತ್ರ, ಸ್ವೀಕೃತಿ ಪತ್ರ ಹಾಗೂ ಇತರೆ ದಾಖಲೆಗಳನ್ನು ಆಯ್ಕೆ ಪ್ರಕ್ರಿಯೆ ಮುಗಿಯುವ ತನಕ ಸುರಕ್ಷಿತವಾಗಿ ಇಟ್ಟುಕೊಳ್ಳತಕ್ಕದ್ದು. ಈ ಅರ್ಜಿಯನ್ನು ಭರ್ತಿ ಮಾಡುವ ವಿಧಾನ, ಮೀಸಲಾತಿ ಪ್ರಮಾಣ ಪತ್ರಗಳ ನಮೂನೆ, ಮೀಸಲಾತಿಯ [Horizontal and vertical Reservations] ವಿವರ ಹಾಗೂ ಸರ್ಕಾರಿ ಆದೇಶಗಳ ಬಗ್ಗೆ ಮಾಹಿತಿ ನೀಡಲಾಗಿದ್ದು, ಅಭ್ಯರ್ಥಿಗಳು ಅವುಗಳನ್ನು ಗಮನವಿಟ್ಟು ಓದಿಕೊಳ್ಳತಕ್ಕದ್ದು.

***14.*** ದುರ್ನಡತೆ: ಒಬ್ಬ ಅಭ್ಯರ್ಥಿಯು ನಕಲು ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂಬ ಬಗ್ಗೆ ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ಆಯ್ಕೆ ಪ್ರಾಧಿಕಾರದಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದೇ ಅಲ್ಲದೇ, ಆಯ್ಕೆ ಪ್ರಾಧಿಕಾರವು ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

***15.*** ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿದ ನಂತರ ಅಭ್ಯರ್ಥಿಗಳು ಆಕ್ಷೇಪಣೆ ಸಲ್ಲಿಸುವಾಗ ಮೂಲ ಅರ್ಜಿಯಲ್ಲಿ ದಾಖಲಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ಸಲ್ಲಿಸಬಹುದು. [ಅರ್ಜಿಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ] ನಮೂದಿಸಲು ಬಿಟ್ಟುಹೋಗಿದ್ದ ಯಾವುದೇ

ಮಾಹಿತಿಯನ್ನು ಹೊಸದಾಗಿ ದಾಖಲಿಸಲು ಬಯಸುವ ಮಾಹಿತಿಗಳನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ಆಕ್ಷೇಪಣೆ ಮತ್ತು ಲಗತ್ತುಗಳನ್ನು ಪರಿಗಣಿಸದೇ ತಿರಸ್ಕರಿಸಲಾಗುವುದು.

*16.* ಅರ್ಜಿ ನಮೂನೆ, ಉತ್ತರ ಪತ್ರಿಕೆ, ಪ್ರವೇಶ ಪತ್ರಗಳ ನಿಗದಿತ ಸ್ಥಳಗಳಲ್ಲಿ ಎಡಗೈ ಹೆಬ್ಬೆಟ್ಟು ಗುರುತನ್ನು ಸ್ಪಷ್ಟವಾಗಿ ಹಾಕಬೇಕು. ಎಡಗೈ ಹೆಬ್ಬೆರಳ ಗುರುತು ರಹಿತ ಅರ್ಜಿಯನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸಲಾಗುವುದು.

*17.* ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ನಂತರ ಪ್ರವೇಶ ಪತ್ರದ ಪ್ರತಿಯನ್ನು ದ್ವಿಪ್ರತಿಯಲ್ಲಿ ಡೌನ್‌ಲೋಡ್ ಮಾಡಿಕೊಂಡು ಆ ಪ್ರತಿಗಳಲ್ಲಿ ಒಂದೇ ಮಾದರಿಯ ಇತ್ತೀಚಿನ ತಲಾ ಒಂದು ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು.

*18.* ನೇಮಕಾತಿ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೆ ಈ ಸಂಬಂಧ ಆಯ್ಕೆ ಪ್ರಾಧಿಕಾರಿ / ನೇಮಕಾತಿ ಪ್ರಾಧಿಕಾರಿಗಳು ನೀಡುವ ಸೂಚನೆಗಳನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್ [http://schooleducation.kar.nic.in] ನಲ್ಲಿ ಅವಲೋಕಿಸುವುದು.

*19.* ಈ ಪರೀಕ್ಷೆಯನ್ನು ಶಿಕ್ಷಕರ ಅರ್ಹತಾ ಪರೀಕ್ಷೆಯೆಂದು ಪರಿಗಣಿಸಲಾಗುವುದು. ನಿಗದಿತ ಅರ್ಹತೆ ಪಡೆದಿರುವವರಿಗೆ ಕ್ರಮ ಸಂಖ್ಯೆ 2 ರಲ್ಲಿ ತಿಳಿಸಿರುವಂತೆ ಅರ್ಹತಾ ಪ್ರಮಾಣ ಪತ್ರ ನೀಡಲಾಗುವುದು. ಮುಂದಿನ ನೇಮಕಾತಿಗಳಿಗೂ ಸಹ ಈ ಪ್ರಮಾಣ ಪತ್ರವನ್ನು ಉಪಯೋಗಿಸಬಹುದಾಗಿದೆ.

ಹೆಚ್ಚಿನ ವಿವರಗಳಿಗೆ ಆನ್‌ಲೈನ್‌ನಲ್ಲಿ ನೀಡಿರುವ ಸೂಚನೆಗಳನ್ನು ಗಮನಿಸಬೇಕು. ಹಾಗೂ ಯಾವುದೇ ಹೆಚ್ಚಿನ ಸ್ಪಷ್ಟೀಕರಣಕ್ಕೆ ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಇವರ ಕಛೇರಿಯನ್ನು ಸಂಪರ್ಕಿಸಬಹುದು.

ಆಯ್ಕೆ ಪ್ರಾಧಿಕಾರಿ ಹಾಗೂ ಜಿಲ್ಲಾ ಉಪನಿರ್ದೇಶಕರು,
ಸಾರ್ವಜನಿಕ ಶಿಕ್ಷಣ ಇಲಾಖೆ,
ಕೊಡಗು ಜಿಲ್ಲೆ.

***ಕೊಡಗು ಜಿಲ್ಲೆಯ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗೆ ಪ್ರಕಟಿಸಲಾದ ಖಾಲಿ ಹುದ್ದೆಗಳ ವರ್ಗೀಕರಣ***

***ವಿಷಯ: ಕನ್ನಡ***

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | ಒಟ್ಟು |
|---|---|---|---|---|---|---|---|---|---|---|---|---|---|
| | | | | ಗುಂಪುವಾರು | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | |
| ವಿರಾಜಪೇಟೆ | ಇಲ್ಲ | 17 | 17 | ಇತರೆ | 1 | | | 2 | | | | 3 | 6 |
| | | | | ಗ್ರಾ.ಅ | | 1 | | | | 1 | 1 | 2 | 5 |
| | | | | ಅಂಗವಿಕಲ | | | 1 | | | | | | 1 |
| | | | | ಮಾ.ಸೈನಿಕ | 1 | | | 1 | | | | 1 | 3 |
| | | | | ಕ.ಮಾ.ಅ | | | | | | | | 1 | 1 |
| | | | | ಯೋ.ನಿ.ಅ | | | | | | | | 1 | 1 |
| ಒಟ್ಟು | | | | | **2** | **1** | **1** | **3** | **0** | **1** | **1** | **8** | **17** |

***ವಿಷಯ: ಆಂಗ್ಲ***

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | ಒಟ್ಟು |
|---|---|---|---|---|---|---|---|---|---|---|---|---|---|
| | | | | ಗುಂಪುವಾರು | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | |
| ವಿರಾಜಪೇಟೆ | ಇಲ್ಲ | 1 | 1 | ಇತರೆ | | | | | | | | | |
| | | | | ಗ್ರಾ.ಅ | 1 | | | | | | | | 1 |
| | | | | ಅಂಗವಿಕಲ | | | | | | | | | |
| | | | | ಮಾ.ಸೈನಿಕ | | | | | | | | | |
| | | | | ಕ.ಮಾ.ಅ | | | | | | | | | |
| | | | | ಯೋ.ನಿ.ಅ | | | | | | | | | |
| ಒಟ್ಟು | | | | | **1** | **0** | **0** | **0** | **0** | **0** | **0** | **0** | **1** |

*ವಿಷಯ: ವಿಜ್ಞಾನ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | ಒಟ್ಟು |
|---|---|---|---|---|---|---|---|---|---|---|---|---|---|
| | | | | ಗುಂಪುವಾರು | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | |
| ವಿರಾಜಪೇಟೆ | ಇಲ್ಲ | 1 | 1 | ಇತರೆ | | | | | | | | | |
| | | | | ಗ್ರಾ.ಅ | | | | | | | | 1 | 1 |
| | | | | ಅಂಗವಿಕಲ | | | | | | | | | |
| | | | | ಮಾ.ಸೈನಿಕ | | | | | | | | | |
| | | | | ಕ.ಮಾ.ಅ | | | | | | | | | |
| | | | | ಯೋ.ನಿ.ಅ | | | | | | | | | |
| ಒಟ್ಟು | | | | | **0** | **0** | **0** | **0** | **0** | **0** | **0** | **1** | **1** |

*ವಿಷಯ: ತಮಿಳು*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | ಒಟ್ಟು |
|---|---|---|---|---|---|---|---|---|---|---|---|---|---|
| | | | | ಗುಂಪುವಾರು | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | |
| ವಿರಾಜಪೇಟೆ | ಇಲ್ಲ | 1 | 1 | ಇತರೆ | | | | 1 | | | | | 1 |
| | | | | ಗ್ರಾ.ಅ | | | | | | | | | |
| | | | | ಅಂಗವಿಕಲ | | | | | | | | | |
| | | | | ಮಾ.ಸೈನಿಕ | | | | | | | | | |
| | | | | ಕ.ಮಾ.ಅ | | | | | | | | | |
| | | | | ಯೋ.ನಿ.ಅ | | | | | | | | | |
| ಒಟ್ಟು | | | | | **0** | **0** | **0** | **1** | **0** | **0** | **0** | **0** | **1** |

*ಉಪನಿರ್ದೇಶಕರು ಹಾಗೂ ಆಯ್ಕೆ ಪ್ರಾಧಿಕಾರಿಗಳು,*
*ಸಾ.ಶಿ.ಇಲಾಖೆ, ಕೊಡಗು*


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – V | ಬೆಂಗಳೂರು, ಶನಿವಾರ, ಫೆಬ್ರವರಿ ೨, ೨೦೧೩ (ಮಾಘ ೧೩, ಶಕ ವರ್ಷ ೧೯೩೪) | ನಂ.೧೨೬ |
| ***Part – V*** | ***Bangalore, Saturday, February 2, 2013 (Magha 13, Shaka Varsha 1934)*** | ***No. 126*** |


## ಸಾರ್ವಜನಿಕ ಶಿಕ್ಷಣ ಇಲಾಖೆ

### ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ದಕ್ಷಿಣ ಕನ್ನಡ ಜಿಲ್ಲೆ

### ನೇಮಕಾತಿ ಅಧಿಸೂಚನೆ

**ಸಂಖ್ಯೆ:ಸಿ3[1]ಪ್ರಾಶಿಅ:ನೇಮಕ:15:2011–12, ಬೆಂಗಳೂರು, ದಿನಾಂಕ:02ನೇ ಫೆಬ್ರವರಿ, 2013**

**ವಿಷಯ:** 2012–13ನೇ ಸಾಲಿಗಾಗಿ ಸರ್ಕಾರಿ ಪ್ರಾಥಮಿಕ ಶಾಲಾ ಸಹಶಿಕ್ಷಕ / ಶಿಕ್ಷಕಿ ವೃಂದದ ಹುದ್ದೆಗಳನ್ನು ನೇರ ನೇಮಕಾತಿಯಿಂದ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಕೃತ ಪ್ರಕಟಣೆ ಸಂ:ಇಡಿ:ಡಿಪಿಎಆರ್:41:ಎಸ್‌ಆರ್‌ಇ:2001, ದಿನಾಂಕ:09.08.2001.

2] ಸರ್ಕಾರಿ ಆದೇಶ ಸಂ:ಸಿಆಸುಇ:08:ಸಹಿಮ:1995, ದಿನಾಂಕ:20.06.1995.

3] ಸರ್ಕಾರಿ ಆದೇಶ ಸಂ:ಸಿಆಸುಇ:97:ಸನೆನಿ:2002, ದಿನಾಂಕ:22.11.2002.

4] ಸರ್ಕಾರಿ ಆದೇಶ ಸಂ:ಸಿಆಸುಇ:53:ಸೇನೇನಿ:2007, ದಿನಾಂಕ:04.01.2008.

5] ಸರ್ಕಾರಿ ಆದೇಶ ಸಂ:ಇಡಿ:21:ಯೋಯೋಕ:2010, ದಿನಾಂಕ:02.11.2012.

6] ಸರ್ಕಾರಿ ಆದೇಶ ಸಂ:ಇಡಿ:238:ಪಿಬಿಐ:2012, ದಿನಾಂಕ:21.01.2013.

ಸಾರ್ವಜನಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಪರೀಕ್ಷೆ ಮೂಲಕ ಅಂದರೆ ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ [ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್] [ರೆಕ್ರೂಟ್‌ಮೆಂಟ್] [ಅಮೆಂಡ್‌ಮೆಂಟ್] ರೂಲ್ಸ್–2001 [ಸಂ:ಡಿಪಿಎಆರ್:41:ಎಸ್‌ಆರ್‌ಇ:2001, ದಿ:09.08.2001]ರ ನಿಯಮಗಳನ್ವಯ ಆಯ್ಕೆ ಮಾಡಲು ಈ ನೇಮಕಾತಿ ಅಧಿಸೂಚನೆ ಹೊರಡಿಸಿದೆ. ನೇಮಕಾತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನ ಅಂದರೆ ದಿನಾಂಕ:02.03.2013ರಂದು ಅರ್ಹರಾಗಿರುವ ಅಭ್ಯರ್ಥಿಗಳಿಂದ ನಿಗದಿಪಡಿಸಿರುವ ಅರ್ಜಿ ನಮೂನೆಯಲ್ಲಿ ಆನ್‌ಲೈನ್ ಮೂಲಕ ಅರ್ಜಿಗಳನ್ನು ಕರೆಯಲಾಗಿದೆ. ಇತರೆ ಯಾವುದೇ ನಮೂನೆಯಲ್ಲಿ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಆಯ್ಕೆ ಮಾಡಲು ಉಲ್ಲೇಖದಲ್ಲಿ ನಮೂದಿಸಿರುವ ನೇಮಕಾತಿ ನಿಯಮಗಳು, ಮೀಸಲಾತಿ ನಿಯಮಗಳು ಹಾಗೂ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರದ ಆದೇಶಗಳ ಪ್ರಕಾರ ಇರುವ ಪ್ರಚಲಿತ ನಿಯಮಗಳನ್ನು ಅನುಸರಿಸಿ ಆಯ್ಕೆ ಮಾಡಲು ಪ್ರಕಟಣೆಯನ್ನು ಸಾರ್ವಜನಿಕರ ತಿಳುವಳಿಕೆಗಾಗಿ ನೀಡಲಾಗಿದೆ.

***ಟಿಪ್ಪಣಿ:*** ಈಗ ಅಧಿಸೂಚಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

***01] ಆಯ್ಕೆಗಾಗಿ ಪ್ರಕಟಿಸಿರುವ ಹುದ್ದೆಗಳು ಹಾಗೂ ವೇತನ ಶ್ರೇಣಿ:***

***01.*** ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ], ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು, ಮಲಯಾಳಂ ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

***02.*** ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ವಿಜ್ಞಾನ] ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು, ಮಲಯಾಳಂ ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

***03.*** ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ಆಂಗ್ಲ ಭಾಷೆ] ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು, ಮಲಯಾಳಂ ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

***04.*** ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ಹಿಂದಿ] ಕನ್ನಡ ಮಾಧ್ಯಮದ ಶಾಲೆಗಳಲ್ಲಿ ಹುದ್ದೆಗಳ ಸಂಖ್ಯೆ ಹಾಗೂ ವಿಷಯಗಳು ಸಂಬಂಧಿಸಿದ ಅಧಿಸೂಚನೆಯಲ್ಲಿ ನಮೂದಿಸಿರುವ ಮ್ಯಾಟ್ರಿಕ್ಸ್‌ಗೆ ಅನುಗುಣವಾಗಿರುತ್ತದೆ. ಮ್ಯಾಟ್ರಿಕ್ಸ್ ಪ್ರತಿಯನ್ನು ಮಾಹಿತಿ ಪುಸ್ತಕದೊಂದಿಗೆ ಲಗತ್ತಿಸಿದೆ.

***ವೇತನ ಶ್ರೇಣಿ–[13600–26700]:–***

13600–300–14200–350–15600–400–17200–450–19000–500–21000–6000–24600–700–26700

***02] ಆಯ್ಕೆಗೆ ಅರ್ಹತೆ:***

ಆಯ್ಕೆಗೆ ಅರ್ಹತೆ ಪಡೆಯಲು ಅರ್ಜಿ ಸ್ವೀಕರಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳು ಆಯಾ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿ ಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿಯನ್ನು ಹೊಂದಿರಬೇಕು. ಶಿಕ್ಷಕರ ಅರ್ಹತಾ ಪರೀಕ್ಷೆಯ ಮಾದರಿಯಲ್ಲಿ ನಡೆಸಲಾಗುವ ಸದರಿ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. ಅಲ್ಲದೆ, ಈ ಪರೀಕ್ಷೆಯಲ್ಲಿ ಎನ್.ಸಿ.ಟಿ.ಇ ನಿಯಮಾವಳಿಗಳಂತೆ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಕನಿಷ್ಠ ಶೇ.60 ಅಂಕಗಳು ಮತ್ತು ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ / ಇತರೆ ಹಿಂದುಳಿದ ವರ್ಗದ ಅಭ್ಯರ್ಥಿಗಳಿಗೆ ಕನಿಷ್ಠ ಶೇ.55 ಹಾಗೂ ಅಂಗವಿಕಲ ಮತ್ತು ಮಾಜಿ ಸೈನಿಕ ವರ್ಗದಲ್ಲಿ ಕನಿಷ್ಠ ಶೇ.50 ಅಂಕಗಳನ್ನು ಗಳಿಸಬೇಕಾಗುತ್ತದೆ. ಈ ಅಂಕಗಳನ್ನು ಪಡೆದ ಅಭ್ಯರ್ಥಿಗಳು ಮಾತ್ರ ಆಯ್ಕೆಗೆ ಅರ್ಹತೆ ಹೊಂದುತ್ತಾರೆ. ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಲ್ಲದೆ, ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಅವರು ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ.ಯಲ್ಲಿ ಆ ಭಾಷೆಯ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರಬೇಕು ಅಥವಾ ಪ್ರಥಮ / ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು.

***03] ನಿಗದಿತ ಅರ್ಜಿ ನಮೂನೆ ಸಲ್ಲಿಸುವ ವಿಧಾನ:***

ಅಭ್ಯರ್ಥಿಯು ಆನ್‌ಲೈನ್ [ON LINE] ಮೂಲಕ ಇಲಾಖೆಯ ಅಧಿಕೃತ ವೆಬ್‌ಸೈಟ್ [http://schooleducation.kar.nic.in] ಮುಖಾಂತರ ಅರ್ಜಿ ಸಲ್ಲಿಸಬೇಕು. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶ ಇರುವುದಿಲ್ಲ. ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ನಂತರ [After submission of application] ದೊರೆಯುವ ಗಣಕೀಕೃತ ಅರ್ಜಿ ಸಂಖ್ಯೆಯನ್ನು ಪಡೆದುಕೊಳ್ಳುವುದು ಮತ್ತು ಸದರಿ ಸಂಖ್ಯೆಯನ್ನು ಕಡ್ಡಾಯವಾಗಿ ಬರೆದಿಟ್ಟುಕೊಳ್ಳತಕ್ಕದ್ದು. ಈ ಅರ್ಜಿ ಸಂಖ್ಯೆಯು ನೇಮಕಾತಿ ಪ್ರಕ್ರಿಯೆಯ ಎಲ್ಲಾ ಹಂತಗಳಿಗೆ ಅವಶ್ಯಕವಾಗಿರುತ್ತದೆ. ಆನ್ ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಗಳು ಸ್ವೀಕೃತಿ ಪತ್ರ ಮತ್ತು ಚಲನ್ ಪ್ರತಿಗಳ ಮುದ್ರಿತ ಪ್ರತಿಗಳನ್ನು ತೆಗೆದುಕೊಳ್ಳತಕ್ಕದ್ದು. ಮುದ್ರಿತ ಚಲನ್ ಪ್ರತಿಯನ್ನು ಆಧರಿಸಿ ಪರೀಕ್ಷಾ ಶುಲ್ಕವನ್ನು ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಯಾವುದಾದರೂ ಶಾಖೆಯಲ್ಲಿ ಪಾವತಿಸಬಹುದು. ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ. ಹಾಗೂ ಸದರಿ ಶುಲ್ಕವನ್ನು ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಈ ಕೆಳಕಂಡಂತೆ ನಿಗದಿಪಡಿಸಿದ ಅರ್ಜಿ ಶುಲ್ಕವನ್ನು ಕೊನೆಯ ದಿನಾಂಕದೊಳಗೆ ಆನ್‌ಲೈನ್ ಮೂಲಕವೇ ಪಾವತಿಸುವುದು. ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶಪತ್ರಗಳನ್ನು ಮೇಲೆ ನಮೂದಿಸಿರುವ ವೆಬ್‌ಸೈಟ್‌ನಲ್ಲಿ ಡೌನ್‌ಲೋಡ್ ಮಾಡಿಕೊಳ್ಳಬೇಕು. ಪ್ರವೇಶ ಪತ್ರಗಳನ್ನು ಡೌನ್‌ಲೋಡ್ ಮಾಡಿಕೊಳ್ಳಲು ನಿಗದಿಪಡಿಸಿದ ಅವಧಿಯನ್ನು ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಆನ್‌ಲೈನ್ ಅರ್ಜಿಯನ್ನು ಸಲ್ಲಿಸುವಾಗ ಅಭ್ಯರ್ಥಿಗೆ ನೀಡಿರುವ ನೊಂದಣಿ ಸಂಖ್ಯೆ ಮತ್ತು ಇತರೆ ಮಾಹಿತಿಯನ್ನು ವೆಬ್‌ಸೈಟ್‌ನಲ್ಲಿ ನಮೂದಿಸಿ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರವನ್ನು ಡೌನ್‌ಲೋಡ್ ಮಾಡಿಕೊಳ್ಳುವುದು. ಕೊನೆಯ ದಿನಾಂಕದ ನಂತರ ಪಾವತಿಸಿದ ಅರ್ಜಿ ಶುಲ್ಕವನ್ನು ಪರಿಗಣಿಸಲಾಗುವುದಿಲ್ಲ ಮತ್ತು ಸ್ವೀಕರಿಸಲಾಗುವುದಿಲ್ಲ. ಅರ್ಜಿಗಳನ್ನು ಆನ್‌ಲೈನ್ ಮೂಲಕ ಭರ್ತಿ ಮಾಡಬೇಕಾಗಿದ್ದು, ಈ ಬಗ್ಗೆ ಮಾರ್ಗಸೂಚಿಯನ್ನು ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗಿದೆ.

***04] ಅರ್ಜಿ ಸಲ್ಲಿಸಲು ಪಾವತಿಸಬೇಕಾದ ಶುಲ್ಕ:***

***01.*** ಪರಿಶಿಷ್ಠ ಜಾತಿ, ಪರಿಶಿಷ್ಠ ವರ್ಗ, ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ – ರೂ. 200/–

***02.*** ಇತರೆ ಎಲ್ಲಾ ಅಭ್ಯರ್ಥಿಗಳಿಗೆ – ರೂ. 400/–

***03.*** ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್:142:ಎಸ್‌ಆರ್‌ಆರ್:2006, ದಿ:05.11.2007ರ ರೀತ್ಯಾ ಅಂಗವಿಕಲ ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕ ಪಾವತಿಸಲು ವಿನಾಯ್ತಿ ಕಲ್ಪಿಸಿದೆ.

***05] ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ:***

ದಿನಾಂಕ:02.03.2013ರ ಸಂಜೆ 5.30ರೊಳಗೆ ಅಥವಾ ಅದಕ್ಕೂ ಮೊದಲು.

***06] ವಿವಿಧ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಬಗ್ಗೆ:***

ಎಲ್ಲಾ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಒಂದೇ ಅರ್ಜಿ ನಮೂನೆಯನ್ನು ನಿಗದಿಪಡಿಸಿದೆ.

ಅಭ್ಯರ್ಥಿಗಳು ಒಂದೇ ಅರ್ಜಿಯಲ್ಲಿ ಒಂದಕ್ಕಿಂತ ಹೆಚ್ಚು ವಿಷಯದ ಹುದ್ದೆಗಳಿಗೆ ಅರ್ಜಿ ಸಲ್ಲಿಸಬಹುದಾಗಿದೆ. ಪ್ರತ್ಯೇಕ ಅರ್ಜಿಗಳ ಅವಶ್ಯಕತೆ ಇರುವುದಿಲ್ಲ. ಆದರೆ, ಹುದ್ದೆಗಳಿಗೆ ತಮ್ಮ ಆದ್ಯತೆಯನ್ನು ನಮೂದಿಸಬೇಕು. ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿಯರ ವೃಂದದ ವಿಷಯಗಳ ಹಾಗೂ ವಿವಿಧ ಮಾಧ್ಯಮದ ಬ್ಲಾಕ್‌ವಾರು ಹುದ್ದೆಗಳ ಸಂಖ್ಯೆ ಮತ್ತು ಮೀಸಲಾತಿ ವರ್ಗೀಕರಣದ ವಿವರಗಳನ್ನು ಈ ಅಧಿಸೂಚನೆಗೆ ಲಗತ್ತಿಸಿರುವ ***"ವರ್ಗೀಕರಣದ ಅನುಬಂಧದಲ್ಲಿ"*** ಪ್ರತ್ಯೇಕವಾಗಿ ನೀಡಲಾಗಿದೆ.

***07] ಅಭ್ಯರ್ಥಿಗಳ ಅರ್ಹತೆ:***

ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ಅರ್ಹತೆಗಳು.

- ***ವಿದ್ಯಾರ್ಹತೆ :*** ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಯು ನೇಮಕಾತಿ ನಿಯಮಗಳಲ್ಲಿ ನಿಗದಿಗೊಳಿಸಲಾಗಿರುವ ವಿದ್ಯಾರ್ಹತೆ ಹೊಂದಿರಬೇಕು. ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ವಿದ್ಯಾರ್ಹತೆ ವಿವರಗಳು ಕೆಳಗಿನಂತೆ ಇರುತ್ತವೆ.

***I ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ] ಹುದ್ದೆಗಳಿಗೆ:***

*ಅ.* ಪಿ.ಯು.ಸಿ ಮತ್ತು ಟಿ.ಸಿ.ಹೆಚ್ / ಡಿ.ಇಡಿ., ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.

ಆದರೆ 1989ಕ್ಕಿಂತ ಮೊದಲು ಟಿ.ಸಿ.ಹೆಚ್. ಕೋರ್ಸಿಗೆ ಪ್ರವೇಶ ಪಡೆದ ಅಭ್ಯರ್ಥಿಗಳು.

ಎಸ್.ಎಸ್.ಎಲ್.ಸಿ ಮತ್ತು ಟಿ.ಸಿ.ಹೆಚ್ ಅಥವಾ ಪಿ.ಯು.ಸಿ ಇಂಟರ್ನ್‌ಶಿಪ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದಲ್ಲಿ ಅರ್ಹತೆ ಪಡೆಯುತ್ತಾರೆ.

*ಆ.* ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ/ ಪಿ.ಯು.ಸಿ / ಟಿ.ಸಿ.ಹೆಚ್ / ಡಿ.ಇಡಿ., ಯನ್ನು ಅಭ್ಯಾಸ ಮಾಡಿರಬೇಕು.

***ಅಥವಾ***

ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷೆಯನ್ನು ಎಸ್.ಎಸ್.ಎಲ್.ಸಿ / ಪಿ.ಯು.ಸಿ / ಟಿ.ಸಿ.ಹೆಚ್ / ಡಿ.ಇಡಿ., ನಲ್ಲಿ ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡಿರಬೇಕು.

***ಅಥವಾ***

***ಕನ್ನಡ ಮಾಧ್ಯಮದ ಹುದ್ದೆಗಳಿಗೆ :*** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಕನ್ನಡ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

***II ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ವಿಜ್ಞಾನ] ಹುದ್ದೆಗಳಿಗೆ:***

***01.*** ಪಿ.ಯು.ಸಿ.ಯಲ್ಲಿ ವಿಜ್ಞಾನ ಮತ್ತು ಗಣಿತ ವಿಷಯಗಳನ್ನು ಐಚ್ಛಿಕ ವಿಷಯವನ್ನಾಗಿ ಅಭ್ಯಾಸ ಮಾಡಿರಬೇಕು ಮತ್ತು ಟಿ.ಸಿ.ಹೆಚ್ / ಡಿ.ಇಡಿ., ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.

***02.*** ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ/ ಪಿ.ಯು.ಸಿ / ಟಿ.ಸಿ.ಹೆಚ್ / ಡಿ.ಇಡಿ., ನ್ನು ಅಭ್ಯಾಸ ಮಾಡಿರಬೇಕು.

***ಅಥವಾ***

ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷೆಯನ್ನು ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ ಅಥವಾ ಟಿ.ಸಿ.ಹೆಚ್/ಡಿ.ಇಡಿ., ನಲ್ಲಿ ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಭ್ಯಾಸ ಮಾಡಿರಬೇಕು.

***ಅಥವಾ***

***ಕನ್ನಡ ಮಾಧ್ಯಮದ ಹುದ್ದೆಗಳಿಗೆ :*** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಕನ್ನಡ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

***III ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ಆಂಗ್ಲ ಭಾಷೆ] ಹುದ್ದೆಗಳಿಗೆ:***

*01.* ಪಿ.ಯು.ಸಿ. ಮತ್ತು ಟಿ.ಸಿ.ಹೆಚ್ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.

*02.* ಪಿ.ಯು.ಸಿ.ಯಲ್ಲಿ ಆಂಗ್ಲ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಭ್ಯಾಸ ಮಾಡಿರಬೇಕು.

***ಅಥವಾ***

ಪಿ.ಯು.ಸಿ ಮತ್ತು ಟಿ.ಸಿ.ಹೆಚ್.ನ್ನು ಆಂಗ್ಲ ಮಾಧ್ಯಮದಲ್ಲಿ ಅಭ್ಯಾಸ ಮಾಡಿರಬೇಕು.

ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಮಾಧ್ಯಮದ ಭಾಷೆಯನ್ನು ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ.ಯಲ್ಲಿ ಪ್ರಥಮ / ದ್ವಿತೀಯ ಭಾಷೆಯನ್ನಾಗಿ ಓದಿರಬೇಕು.

***ಅಥವಾ***

***ಕನ್ನಡ ಮಾಧ್ಯಮದ ಹುದ್ದೆಗಳಿಗೆ :*** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಕನ್ನಡ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

***ಸೂಚನೆ:***

1989ಕ್ಕಿಂತ ಮುಂಚೆ ಇದ್ದ ಪಿ.ಯು.ಸಿ ಇಂಟರ್ನ್‌ಶಿಪ್ ಪರೀಕ್ಷೆಯನ್ನು ಎಸ್.ಎಸ್.ಎಲ್.ಸಿ ನಂತರ ಟಿ.ಸಿ.ಹೆಚ್.ಗೆ ತತ್ಸಮಾನ ಪರೀಕ್ಷೆ ಎಂದು ಪರಿಗಣಿಸಿರುವುದರಿಂದ ಪಿ.ಯು.ಸಿ ಇಂಟರ್ನ್‌ಶಿಪ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿರುವ ಅಭ್ಯರ್ಥಿಗಳು ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ಆಂಗ್ಲ ಭಾಷಾ ಮತ್ತು ವಿಜ್ಞಾನ ಹುದ್ದೆಗಳಿಗೆ ಅರ್ಹರಾಗುವುದಿಲ್ಲ. ಈ ಬಗ್ಗೆ ವೃಂದ ಮತ್ತು ನೇಮಕಾತಿ ನಿಯಮಗಳ–2001ರ ತಿದ್ದುಪಡಿಯಲ್ಲಿ ನಿಯಮ–66ರ ವಿದ್ಯಾರ್ಹತೆ ಕಾಲಂನಲ್ಲಿ ಸ್ಪಷ್ಟವಾಗಿ ನಮೂದಿಸಲಾಗಿದೆ. 1988ರ ನಂತರ ಪಿ.ಯು.ಸಿ ಇಂಟರ್ನ್‌ಶಿಪ್ ಪರೀಕ್ಷೆಯನ್ನು ಇತರೆ ವಿಷಯಗಳ ಪಿ.ಯು.ಸಿ ಪರೀಕ್ಷೆಗೆ ತತ್ಸಮಾನ ಎಂದು ಪರಿಗಣಿಸಲಾಗಿದೆ.

***IV ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ಕನ್ನಡ ಮಾಧ್ಯಮದ ಶಾಲೆಗಳಲ್ಲಿ [ಹಿಂದಿ ಭಾಷೆ] ಹುದ್ದೆಗಳಿಗೆ:***

*01.* ಪಿ.ಯು.ಸಿ ಮತ್ತು ಟಿ.ಸಿ.ಹೆಚ್ / ಡಿ.ಇಡಿ., ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.

- ಆದರೆ, 1988ಕ್ಕಿಂತ ಮೊದಲು ಟಿ.ಸಿ.ಹೆಚ್ ಕೋರ್ಸಿಗೆ ಪ್ರವೇಶ ಪಡೆದ ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ ಮತ್ತು ಟಿ.ಸಿ.ಹೆಚ್ / ಪಿ.ಯು.ಸಿ ಇಂಟರ್ನ್‌ಶಿಪ್ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದಲ್ಲಿ ಅರ್ಹತೆ ಪಡೆಯುತ್ತಾರೆ.

*02.* ಎಸ್.ಎಸ್.ಎಲ್.ಸಿ ಅಥವ ಪಿ.ಯು.ಸಿ.ಯಲ್ಲಿ ಹಿಂದಿಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಕಡ್ಡಾಯವಾಗಿ ಅಭ್ಯಾಸ ಮಾಡಿರಬೇಕು.

***ಅಥವಾ***

- ಕೆಳಕಂಡ ಯಾವುದಾದರೊಂದು ಪರೀಕ್ಷೆ ಅಥವಾ ರಾಜ್ಯ ಸರ್ಕಾರದಿಂದ ತತ್ಸಮಾನವೆಂದು ಅನುಮೋದಿತವಾದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.

*ಅ.* ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ ಚಾಮರಾಜಪೇಟೆ ಸಂಸ್ಥೆಯ ***ಹಿಂದಿ ಭಾಷಾ ಭೂಷಣ.***

*ಆ.* ಮೈಸೂರು ಹಿಂದಿ ಪ್ರಚಾರ ಪರಿಷತ್ ಸಂಸ್ಥೆಯ ***ಹಿಂದಿ ಉತ್ತಮ.***

*ಇ.* ಕರ್ನಾಟಕ ಹಿಂದಿ ಪ್ರಚಾರ ಸಮಿತಿ ಜಯನಗರ ಸಂಸ್ಥೆಯ ***ರಾಜಭಾಷಾ ಪ್ರಕಾಶ.***

***ಈ.*** ದಕ್ಷಿಣ ಹಿಂದಿ ಪ್ರಚಾರ ಸಭಾ ಮದರಸು ಸಂಸ್ಥೆಯ ***ರಾಷ್ಟ್ರಭಾಷಾ ವಿಶಾರದ.***

***ಮತ್ತು***

*03.* ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ ಅಥವಾ ಟಿ.ಸಿ.ಹೆಚ್ ಪರೀಕ್ಷೆಯನ್ನು ಕನ್ನಡ ಮಾಧ್ಯಮದಲ್ಲಿ ಅಥವಾ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು.

***ಅಥವಾ***

ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

***C&R Rules ನಲ್ಲಿ "Note: Primary School Assistant Masters / Misters [Science], [English], [Hindi], in primary, Higher Primary and Model Higher Primary School shall form port of the General cadre and they shall teach other subjects also in addition to science / English / Hindi to make up the normal work load for the teacher"*** ಎಂದಿರುತ್ತದೆ.

ಆದ್ದರಿಂದ ಪ್ರಾಥಮಿಕ, ಹಿರಿಯ ಹಾಗೂ ಮಾದರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ವಿಜ್ಞಾನ / ಆಂಗ್ಲ / ಹಿಂದಿ ಪ್ರಾಥಮಿಕ ಶಾಲಾ ಸಹಶಿಕ್ಷಕರು ಸಾಮಾನ್ಯ ಶಿಕ್ಷಕರ ಹುದ್ದೆಯ ಭಾಗವಾಗಿರುತ್ತಾರೆ. ಈ ಶಿಕ್ಷಕರು ಕಾರ್ಯಭಾರ ಹೊಂದಾಣಿಕೆಗೆ ವಿಜ್ಞಾನ / ಆಂಗ್ಲ / ಹಿಂದಿ ವಿಷಯಗಳೊಂದಿಗೆ ಇತರೆ ವಿಷಯಗಳನ್ನು ಸಹಾ ಸಂಬಂಧಿಸಿದ ಶಾಲಾ ಮಾಧ್ಯಮಗಳಲ್ಲಿ ಬೋಧಿಸತಕ್ಕದ್ದು.

***ಸೂಚನೆ:*** ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆ ಪಡೆಯಲು ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಹರಾಗುವುದಿಲ್ಲ. ನಿಗದಿ ಪಡಿಸಿದ ಕೊನೆಯ ದಿನಾಂಕದಂದು ವಿದ್ಯಾರ್ಹತೆಯ ಅಂಕಪಟ್ಟಿ ಹಾಗೂ ಇತರೆ ಸರ್ಟಿಫಿಕೇಟ್‌ಗಳನ್ನು ಪಡೆದಿರಬೇಕು.

***08] ವಯೋಮಿತಿ:***

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

*[ಅ]* ಕನಿಷ್ಠ 18ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

*[ಆ]* ಗರಿಷ್ಠ ವಯೋಮಿತಿ:

| | |
|---|---|
| ಸಾಮಾನ್ಯ ವರ್ಗ | 40 ವರ್ಷ |
| 2ಎ, 2ಬಿ, 3ಎ, 3ಬಿ | 43 ವರ್ಷ |
| ಪ.ಜಾ/ಪ.ಪಂ/ಪ್ರವರ್ಗ–1 | 45 ವರ್ಷ |

***ಸೂಚನೆ:*** ಗೌರವ ಶಿಕ್ಷಕರಿಗೆ ಗರಿಷ್ಠ ವಯೋಮಿತಿ ಅನ್ವಯಿಸುವುದಿಲ್ಲ.

***ಟಿಪ್ಪಣಿ: ಗೌರವ ಶಿಕ್ಷಕರೆಂದರೆ:***

ಜಿಲ್ಲಾ ಪಂಚಾಯತ್ / ಮಂಡಲ ಪಂಚಾಯತ್ ವತಿಯಿಂದ ನೇಮಕಾತಿ ಹೊಂದಿ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಕಾರ್ಯ ನಿರ್ವಹಿಸಿರಬೇಕು / ನಿರ್ವಹಿಸುತ್ತಿರಬೇಕು. ಹಾಗೂ ಗೌರವಧನವನ್ನು ಜಿಲ್ಲಾ ಪಂಚಾಯತ್ / ಮಂಡಲ ಪಂಚಾಯತ್ ವತಿಯಿಂದ ಪಡೆದಿರಬೇಕು / ಪಡೆಯುತ್ತಿರಬೇಕು. ಖಾಸಗಿ ಶಾಲೆಗಳಲ್ಲಿ ಮತ್ತು ಇತರ ಇಲಾಖೆಗಳಲ್ಲಿ ಗೌರವ ಶಿಕ್ಷಕರಾಗಿ ಕಾರ್ಯ ನಿರ್ವಹಿಸಿರುವವರು ಕೃಪಾಂಕ ಪಡೆಯಲು ಅರ್ಹರಿರುವುದಿಲ್ಲ.

***09] ಅಭ್ಯರ್ಥಿಗಳ ಆಯ್ಕೆಗಾಗಿ ಮೆರಿಟ್ ನಿರ್ಧರಿಸುವ ವಿಧಾನ:***

- ಅಭ್ಯರ್ಥಿಯು ಎಸ್.ಎಸ್.ಎಲ್.ಸಿ / ದ್ವಿತೀಯ ಪಿ.ಯು.ಸಿ.ಯಲ್ಲಿ ಗಳಿಸಿದ ಅಂಕಗಳ ಶೇಕಡಾವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಪ್ರಥಮ ಮತ್ತು ದ್ವಿತೀಯ ಟಿ.ಸಿ.ಹೆಚ್ / ಡಿ.ಇಡಿ.,ಗಳ ಬಾಹ್ಯ ಅಂಕಗಳು / ಪಿ.ಯು.ಸಿ ಎಜುಕೇಷನ್ ಪರೀಕ್ಷೆಗಳಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು. (ಬೋರ್ಡ್ ಪರೀಕ್ಷೆಯ ಅಂಕಗಳು ಮಾತ್ರ).
- ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾ ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಎಸ್.ಎಸ್.ಎಲ್.ಸಿ / ದ್ವಿತೀಯ ಪಿ.ಯು.ಸಿ ಶೇಕಡಾ ಅಂಕ + ಎರಡು ವರ್ಷಗಳ ಟಿ.ಸಿ.ಹೆಚ್ / ಡಿ.ಇಡಿ., ಬಾಹ್ಯ ಅಂಕಗಳ ಶೇಕಡಾ ಅಂಕ / ಪಿ.ಯು.ಸಿ ಎಜುಕೇಷನ್‌ನ ದ್ವಿತೀಯ ಪರೀಕ್ಷೆಯ ಶೇಕಡಾ ಅಂಕ + ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಶೇಕಡಾ ಅಂಕಗಳು ಇವುಗಳ ಸರಾಸರಿ ಶೇಕಡಾ ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಅಭ್ಯರ್ಥಿಯು ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ ಸರ್ಕಾರಿ ಸೇವೆ ಸಲ್ಲಿಸಿದ್ದಲ್ಲಿ / ಸಲ್ಲಿಸುತ್ತಿದ್ದಲ್ಲಿ ಇವರಿಗೆ ಪೂರ್ಣಗೊಂಡ ಪ್ರತಿ ವರ್ಷದ ಸೇವಾ ಅವಧಿಗೆ 3 ಕೃಪಾಂಕಗಳಂತೆ ಗರಿಷ್ಠ 15 ಕೃಪಾಂಕಗಳ ಮಿತಿಗೆ ಒಳಪಟ್ಟ ಕೃಪಾಂಕಗಳನ್ನು ನೀಡಲಾಗುವುದು.
- ಗೌರವ ಶಿಕ್ಷಕರು / ಅರೆಕಾಲಿಕ ಶಿಕ್ಷಕರಾಗಿದ್ದಲ್ಲಿ ಸಂಬಂಧಿಸಿದ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರ ಸಲ್ಲಿಸಬೇಕು.
- ಸರಾಸರಿ ಶೇಕಡಾವಾರು ಅಂಕಕ್ಕೆ ಅಭ್ಯರ್ಥಿಯ ಕೃಪಾಂಕಗಳನ್ನು ಸೇರಿಸಲಾಗುವುದು. [ಕೃಪಾಂಕಕ್ಕೆ ಅಭ್ಯರ್ಥಿಯು ಅರ್ಹರಿದ್ದಲ್ಲಿ ಮಾತ್ರ] ಈ ಒಟ್ಟು ಅಂಕಗಳನ್ನು ಅರ್ಹತಾ ಅಂಕವೆಂದು ಪರಿಗಣಿಸಲಾಗುತ್ತದೆ.

***ಸೂಚನೆ:***

ಸರ್ಕಾರದ ಅನುಮೋದನೆಯಂತೆ ಆಯುಕ್ತರ ಅಧಿಕೃತ ಜ್ಞಾಪನ ಸಂಖ್ಯೆ:ಸಿ3[1]ಪ್ರಾಶಿ:ನೇ:20[ಎ]:ಭಾಗ–3: 2005–06, ದಿನಾಂಕ:03.11.2006ರ ಪ್ರಕಾರ ಟಿ.ಸಿ.ಹೆಚ್., ಮತ್ತು ಡಿ.ಇಡಿ., ಪರೀಕ್ಷೆಗಳ ಅಂತರಿಕ ಮೌಲ್ಯಮಾಪನಾ ಅಂಕಗಳನ್ನು ಹೊರತುಪಡಿಸಿ ಕೇವಲ ಬಾಹ್ಯ ಅಂಕಗಳನ್ನು ಮಾತ್ರ ಆಯ್ಕೆಗೆ ಪರಿಗಣಿಸಲಾಗುವುದು.

****** ಅರ್ಜಿ ಭರ್ತಿಮಾಡಲು ಕೊಟ್ಟಿರುವ ಸೂಚನೆಗಳನ್ನು ಗಮನಿಸುವುದು.***

***10] ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು:***

*[ಅ]*

| | | | |
|---|---|---|---|
| **01.** | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | : | ನಮೂನೆ–ಡಿ [ನಿಯಮ–3.ಎ(2)(3)], ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:132:ಎಸ್‌ಎಡಿ:1997, ದಿನಾಂಕ:08.02.2000 |
| **02.** | ಹಿಂದುಳಿದ ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳು. | : | ನಮೂನೆ–ಇ [ನಿಯಮ–3.ಎ(2)(3)], ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:132:ಎಸ್‌ಎಡಿ:1997, ದಿನಾಂಕ:08.02.2000 |
| **03.** | ಹಿಂದುಳಿದ ಪ್ರವರ್ಗ–2.ಎ, 2.ಬಿ, 3.ಎ ಮತ್ತು 3.ಬಿ ಈ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು. | : | ನಮೂನೆ–ಎಫ್ [ನಿಯಮ–3.ಎ(2)(3)] ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:126:ಎಸ್‌ಎಡಿ:1997, ದಿನಾಂಕ:13.02.2003 |

ಅಭ್ಯರ್ಥಿಗಳು ಮೇಲೆ ನಿಗದಿಪಡಿಸಿರುವ ನಿಗದಿತ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರವಿರಬೇಕು ಮತ್ತು ಅವಧಿ ಮೀರಿದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

*[ಆ]* ಮೇಲೆ ವಿವರಿಸಿರುವ ಪ್ರಕಾರ ಸಾಮಾನ್ಯ ಅರ್ಹತೆ ಸೇರಿದಂತೆ ಪ್ರತಿ ಮೀಸಲಾತಿ ಪ್ರವರ್ಗಗಳಿಗೆ ಈ ಕೆಳಕಂಡ ಆದೇಶಗಳ ಪ್ರಕಾರ "ಸಮತಳ ಮೀಸಲಾತಿ" [Horizontal reservation] ಅನ್ವಯ ಹುದ್ದೆಗಳನ್ನು ವರ್ಗೀಕರಿಸಲಾಗಿದೆ.

| | | | |
|---|---|---|---|
| *01.* | ಮಾಜಿ ಸೈನಿಕರಿಗೆ | ಶೇಕಡಾ–10 | ಕರ್ನಾಟಕ ಸಿವಿಲ್ ಸರ್ವೀಸಸ್ [ಜನರಲ್ ರೆಕ್ರೊಟ್‌ಮೆಂಟ್] ರೂಲ್ಸ್ 1977ರ ನಿಯಮ–9[1]ರನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *02.* | ಅಂಗವಿಕಲರಿಗೆ | ಶೇಕಡಾ–5 | ಕರ್ನಾಟಕ ಸಿವಿಲ್ ಸರ್ವೀಸಸ್ [ಜನರಲ್ ರೆಕ್ರೊಟ್‌ಮೆಂಟ್] ರೂಲ್ಸ್ 1977ರ ನಿಯಮ–9[1][ಎ]ರನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *03.* | ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದವರ ಅಭ್ಯರ್ಥಿಗಳಿಗಾಗಿ | ಶೇಕಡಾ–5 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:23:ಎಸ್ಆರ್ಆರ್:1999 ದಿನಾಂಕ:23.11.2000 ಮತ್ತು ಸಂಖ್ಯದ:ಸಿಆಸುಇ:97:ಸೇನಿನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *04.* | ಗ್ರಾಮೀಣ ಅಭ್ಯರ್ಥಿಗಳಿಗೆ | ಶೇಕಡಾ–25 | 2000ದ ಕರ್ನಾಟಕ ಗ್ರಾಮಿಣ ಅಭ್ಯರ್ಥಿಗಳಿಗಾಗಿ [ರಾಜ್ಯ ಸಿವಿಲ್ ಸೇವೆಗಳಲ್ಲಿ ನೇಮಕಾತಿ ಅಥವಾ ಹುದ್ದೆಗಳ ಮೀಸಲಾತಿ ವಿದೇಯಕ] ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನಿನಿ:2002 ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *05.* | ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗಾಗಿ | ಶೇಕಡಾ–5 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:71:ಎಸ್ಆರ್ಆರ್:2001 ದಿ:24.10.2002 ಮತ್ತು ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *06.* | ಮಹಿಳಾ ಅಭ್ಯರ್ಥಿಗಳಿಗೆ | ಶೇಕಡಾ–50 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:41:ಎಸ್ಆರ್ಇ:2001, ದಿನಾಂಕ:09.08.2001ರ ಪ್ರಕಾರ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರಲಾಗಿದ್ದು, ಮಹಿಳೆಯರಿಗೆ ಪ್ರತಿ ಗುಂಪಿನಲ್ಲೂ ಶೇಕಡಾ 50% ಹುದ್ದೆಗಳನ್ನು ಮೀಸಲಿಸಲಾಗಿದೆ. ಮತ್ತು ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿನಾಂಕ:01.04.2008. |

***11] ಮಾಜಿ ಸೈನಿಕ ಅಭ್ಯರ್ಥಿಗಳು:***

"ಮಾಜಿ ಸೈನಿಕ"ರಿಗಾಗಿ ಮೀಸಲಿಟ್ಟ ಖಾಲಿ ಹುದ್ದೆಗಳನ್ನು ಮಿಲಿಟರಿ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿಗಳಿಂದ ಮತ್ತು ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರಿಂದ ನೇಮಕಾತಿ ಮೂಲಕ ತುಂಬಲಾಗುತ್ತದೆ.

***ಮಾಜಿ ಸೈನಿಕರ ಗುಂಪಿನಲ್ಲಿ ಕೆಳಕಂಡವರು ಆಯ್ಕೆಗೆ ಅರ್ಹರು:***

***01. ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ [ಯೋಧ ಅಥವಾ ಅಯೋಧನಾಗಿ] ಸೇವೆ ಸಲ್ಲಿಸಿದ ವ್ಯಕ್ತಿ. ಅಂದರೆ:***

*[ಅ]* ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ವ್ಯಕ್ತಿ.

***ಅಥವಾ***

*[ಆ]* ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ಅನರ್ಹನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಿಂದ ಬಿಡುಗಡೆಯಾದ ವ್ಯಕ್ತಿ.

***ಅಥವಾ***

*[ಇ]* ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

***ಅಥವಾ***

*[ಈ]* ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ಧಿಷ್ಠ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ.

***02. ಮಾಜಿ ಸೈನಿಕ ಅವಲಂಬಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅಂದರೆ:***

ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು. [ಸಂಬಂಧಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು, ಮಾಜಿ ಸೈನಿಕರ ಅವಲಂಬಿತರಡಿಯಲ್ಲಿ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ, ಅಂತಹವರಿಗೆ ವಯೋಮಿತಿ ಸಡಿಲಿಕೆ ಇಲ್ಲ]

***03. ಮಾಜಿ ಸೈನಿಕ ಗುಂಪಿನಲ್ಲಿ ಆಯ್ಕೆ ಹೊಂದಲು ಈ ಕೆಳಕಂಡವರು ಅರ್ಹರಲ್ಲ:***

[ಅ] ಈ ಸೌಲಭ್ಯಕ್ಕೆ ಡಿಫೆನ್ಸ್ ಸೆಕ್ಯುರಿಟಿ ಕೋರ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಕೋರ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಅರ್ಹರಲ್ಲ.

[ಆ] ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

***ಸೂಚನೆ:***

***"ಮಾಜಿ ಸೈನಿಕ" "ಸಶಸ್ತ್ರ ದಳದ ಸದಸ್ಯ" ಮತ್ತು "ಕುಟುಂಬದ ಸದಸ್ಯ"*** ಎಂಬ ಪದಗಳ ಅರ್ಥವು ಕಾಲದಿಂದ ಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ [ಸಾಮಾನ್ಯ ನೇಮಕಾತಿ] ನಿಯಮಗಳು–1977ರಲ್ಲಿ ವಿವರಿಸಿರುವಂತೆ ಇರುತ್ತದೆ.

***12] ಅಂಗವಿಕಲ ಅಭ್ಯರ್ಥಿಗಳು:***

ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಎಂಎಂಡಬ್ಲ್ಯೂ:107:ಪಿಹೆಚ್‌ಪಿ:2003, ದಿ:11.07.2003 ಮತ್ತು ಸಂಖ್ಯೆ:ಡಿಪಿಎಆರ್:50:ಎಸ್‌ಆರ್‌ಆರ್:2000 ದಿ:30.09.2005ರ ಅನ್ವಯ ತಾನು "ಅಂಗವಿಕಲರ ಗುಂಪಿಗೆ ಸೇರಿದವರೆಂದು ಹೇಳಿಕೊಳ್ಳುವ ಅಭ್ಯರ್ಥಿಯು" ವೈದ್ಯಕೀಯ ಪ್ರಮಾಣ ಪತ್ರವನ್ನು ಹೊಂದಿರಬೇಕು. ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್:ಸಿಆಸು:50:ಎಸ್‌ಆರ್‌ಆರ್:2007, ದಿ:26.07.2011ರಲ್ಲಿ ನಿಗದಿಪಡಿಸಿರುವ ಅಂಗವಿಕಲ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗುವುದು. ಸರ್ಕಾರಿ ಆದೇಶ ಸಂಖ್ಯೆ:ಎಂ.ಎ.ಇ:107:ಪಿಹೆಚ್‌ಪಿ:2003 ದಿ:11.07.2003ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಕ್ಷಮ ಜಿಲ್ಲಾ ವೈದ್ಯಕೀಯ ಮಂಡಳಿಯಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:50:ಎಸ್‌ಆರ್‌ಆರ್:2007, ದಿ:26.07.2011ರಲ್ಲಿ ರಾಜ್ಯ ಸರ್ಕಾರವು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿದೆ. ಸದರಿ ಅಧಿಸೂಚನೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅಂಗವಿಕಲ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳ ಉದ್ಧೃತ ಭಾಗವನ್ನು ಈ ಕೆಳಗೆ ನೀಡಲಾಗಿದೆ.

| Blind | Low Vision | Leprosy Cured | Hearing Impaired | Locomotors Disability | Mentally ill | Mentally Retarded |
|---|---|---|---|---|---|---|
| Primary School Music Teacher,<br><br>Secondary School Assistant Grade-II, Assistant Masters [Arts] [Languages] Special Teacher Grade-II, Drama Teachers, Dance Teachers, Music Teachers.<br><br>FDA., SDA., | Primary School Music Teacher, Asst.Masters [General] [English] [Hindi]<br><br>Secondary School Assistant Grade-II, Assistant Masters [Arts] [Languages] Special Teacher Grade-II, Drama Teachers, Dance Teachers, Music Teachers.<br><br>FDA., SDA., Group D, Posts, Peon. | Primary School Assistant Masters [General] [Science] [English] [Hindi] Drawing Teacher<br><br>Secondary School Assistant Grade-II, Assistant Masters [Arts] [Physical Science] [Biological Science] [Languages]<br><br>Special Teacher Grade-II, Drawing Teachers, Drama Teachers, Dance Teachers, Craft Teachers, Music Teachers.<br><br>FDA., SDA., Typist, Steno & Group D., | Primary School Music Teacher, Asst.Masters [General] [English] [Hindi] Drawing Teachers.<br><br>Secondary School Assistant Grade-II, Assistant Masters [Languages] Physical Education Teacher, Grade-II, Drawing Teachers, Drama Teachers, Dance Teachers, Craft Teachers.<br><br>FDA., SDA., Typist, & Group D., | Primary School Assistant Masters [General] [Science] [English] [Hindi] Drawing Teacher<br><br>Secondary School Assistant Grade-II, Assistant Masters [Arts] [Physical Science] [Biological Science] [Languages]<br><br>Special Teacher Grade-II, Drawing Teachers, Drama Teachers, Dance Teachers, Craft Teachers, Music Teachers.<br><br>FDA., SDA., Typist, Steno & Group D Posts. | FDA., SDA., & Group D Posts. | - |

- ದೈಹಿಕ ಅಂಗವಿಕಲ ಅಭ್ಯರ್ಥಿಗಳು ಸರ್ಕಾರಿ ಜಿಲ್ಲಾ ಆಸ್ಪತ್ರೆಗಳಲ್ಲಿರುವ ಮೂಳೆ ತಜ್ಞ [Orthopaedic Surgeon] ರಿಂದ ದೈಹಿಕ ಅಂಗವಿಕಲತೆಯ ಮೌಲೀಕರಣವನ್ನು Alimco Kanpur [W.H.O Standard] ಇದರ ಆಧಾರದ ಮೇಲೆ ಮಾಡಿಸುವುದು ಕಡ್ಡಾಯವಾಗಿರುತ್ತದೆ. ಹಾಗೂ ಶ್ರವಣ

ದೋಷ ಹೊಂದಿರುವ ಅಂಗವಿಕಲ ಅಭ್ಯರ್ಥಿಗಳ ಪ್ರಮಾಣ ಪತ್ರದಲ್ಲಿ ಶ್ರವಣ ದೋಷದ ಪ್ರಮಾಣವನ್ನು ಡೆಸಿಬಲ್ಸ್ [Decibels] ಗಳಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು.

***13] ಗ್ರಾಮೀಣ ಅಭ್ಯರ್ಥಿಗಳು:***

ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರ ನಿಯಮಗಳ ಅಧಿನಿಯಮ–1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964ರಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶ ಹೊರತಾಗಿ ಇತರೆ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಅಭ್ಯರ್ಥಿ.

ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸಂಬಂಧಿಸಿದ ಪ್ರಮಾಣ ಪತ್ರಗಳನ್ನು ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್:96:ಸೇನೆನಿ:2005, ದಿನಾಂಕ:10.08.2005ರಲ್ಲಿ ನೀಡಿರುವ ನಿಗದಿತ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು.

- ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–1ರಲ್ಲಿ ಅಂದರೆ, ಮೇಲುಸ್ಥರದಲ್ಲಿ [creamy layer] ಬರುವುದಿಲ್ಲವೆಂದು ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದ ಪ್ರಮಾಣ ಪತ್ರದ ಜೊತೆಗೆ ಸರ್ಕಾರದ ಆದೇಶ ದಿನಾಂಕ:10.08.2005ರಲ್ಲಿ ನಿಗದಿಪಡಿಸಲಾದ ನಮೂನೆ–2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
- ಪ್ರವರ್ಗ–1, 2.ಎ., 2.ಬಿ., 3.ಎ., 3.ಬಿ., ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಸರ್ಕಾರದ ಆದೇಶ ದಿನಾಂಕ:10.08.2005ರಲ್ಲಿ ನಿಗದಿ ಪಡಿಸಲಾದ ನಮೂನೆ–2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಪಡೆದಿರಬೇಕು.

***14] ಯೋಜನಾ ನಿರಾಶ್ರಿತ ಕುಟುಂಬದ ಅಭ್ಯರ್ಥಿಗಳು:***

ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:23:ಎಸ್ಆರ್ಆರ್:1999, ದಿನಾಂಕ:23.11.2000ರನ್ವಯ ಯೋಜನಾ ನಿರಾಶ್ರಿತ ಕುಟುಂಬದ ಅಭ್ಯರ್ಥಿ ಮೀಸಲಾತಿ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ:ಸಿಆಸುಇ:44:ಸೇನೇನಿ, ದಿನಾಂಕ:27.07.2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ [ತಹಸೀಲ್ದಾರ್] ಅರ್ಜಿ ಸಲ್ಲಿಸುವ ಕೊನೆ ದಿನಾಂದೊಳಗೆ ಪಡೆದಿರಬೇಕು.

***ಯೋಜನೆ ಅಂದರೆ:***

ನಿರಾಶ್ರಿತ ವ್ಯಕ್ತಿಗಳಿಂದ ಪಡೆಯಲಾದ ಜಮೀನನ್ನು ನಿರ್ಮಾಣ ಅಥವಾ ನೀರಾವರಿಯ ಉದ್ದೇಶಕ್ಕಾಗಿ ಅಥವಾ ನೀರು ಸರಬರಾಜು ಮಾಡುವ ಅಭಿವೃದ್ಧಿ ಕಾರ್ಯದ ವಿಸ್ತರಣೆ ಅಥವಾ ವಿದ್ಯುಚ್ಛಕ್ತಿ ಉತ್ಪಾದನೆ ಮತ್ತು ಪೂರೈಕೆ ಅಥವಾ ವಿದ್ಯುಚ್ಛಕ್ತಿ ಕಾರ್ಯಗಳ ಅನುಕೂಲಕರ ಅಭಿವೃದ್ಧಿಯೂ ಸೇರಿದಂತೆ ಸಾರ್ವಜನಿಕ ಉಪಯೋಗಗಳಿಗಾಗಿ ನಿರ್ಮಾಣ ಸುಧಾರಣೆ ಅಥವಾ ಅಭಿವೃದ್ಧಿ ಕಾರ್ಯಗಳ ಯೋಜನೆ.

***ವಿಶೇಷ ಸೂಚನೆ:***

ಈ ಮೇಲ್ಕಂಡ ನಿಯಮಗಳು ಪ್ರಾರಂಭವಾಗುವುದಕ್ಕಿಂತ 20 ವರ್ಷಗಳ ಮುಂಚಿತವಾಗಿ ಯಾವುದೇ ಗ್ರಾಮೀಣದಲ್ಲಿನ ಅಥವಾ ಪ್ಲಾಟ್ ಅಥವಾ ಇನ್ನಿತರ ಯಾವುದೇ ಆಸ್ತಿಗಳನ್ನು ಹೊಂದಿದ್ದು, ಅಂತಹ ಆಸ್ತಿಗಳನ್ನು ಯೋಜನೆಗಳ ಉದ್ದೇಶಕ್ಕಾಗಿ ಉಪಯೋಗಿಸಿಕೊಂಡಿದ್ದಲ್ಲಿ, ಅಂತಹ ಜಮೀನುಗಳನ್ನು ಸ್ವಾಧೀನಪಡಿಸಿಕೊಂಡ ಕಾರಣದಿಂದಾಗಿ ನಿರಾಶ್ರಿತರಾದ ಕುಟುಂಬದ ಸದಸ್ಯರು / ವ್ಯಕ್ತಿಗಳು ಈ ನಿಯಮಗಳಿಗೆ ಸೌಲಭ್ಯ ಪಡೆಯಲು ಅರ್ಹರಿರುವುದಿಲ್ಲ.

ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ:ಸಿಆಸುಇ:44: ಸೇನೇನಿ ದಿನಾಂಕ:27.07.2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

***15] ಕನ್ನಡ ಮಾಧ್ಯಮದ ಅಭ್ಯರ್ಥಿಗಳು:***

1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳೂ ಈ ಮೀಸಲಾತಿಗೆ ಅರ್ಹರಾಗುತ್ತಾರೆ. [1ನೇ ತರಗತಿಗೆ ದಾಖಲಾಗದೇ ನೇರವಾಗಿ ನಂತರದ ಹೆಚ್ಚಿನ ತರಗತಿಗೆ ದಾಖಲಾಗಿ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ್ದಲ್ಲಿ ಸಹ ಈ ಸೌಲಭ್ಯಕ್ಕೆ ಅರ್ಹರಾಗುವರು] ಈ ಅಭ್ಯರ್ಥಿಗಳು ಸಂಬಂಧಿಸಿದ ಮುಖ್ಯೋಪಾಧ್ಯಾಯರಿಂದ ದೃಢೀಕೃತ ಪ್ರಮಾಣ ಪತ್ರಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳವರ ಮೇಲುಸಹಿಯೊಂದಿಗೆ ಸಲ್ಲಿಸತಕ್ಕದ್ದು. ಪ್ರಮಾಣ ಪತ್ರಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳವರ ಮೇಲು ಸಹಿಯೊಂದಿಗೆ ಸಲ್ಲಿಸತಕ್ಕದ್ದು. ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು.

***16] ಗೌರವ ಶಿಕ್ಷಕರ ಪ್ರಮಾಣ ಪತ್ರ:***

ಸರ್ಕಾರಿ ಶಾಲೆಗಳಲ್ಲಿ ಗೌರವ ಶಿಕ್ಷಕರಾಗಿ ಸಲ್ಲಿಸಿದ ಸೇವಾ ಅವಧಿಗೆ ಕೃಪಾಂಕ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಸಂಬಂಧಿಸಿದ ಶಾಲೆಯ ಮುಖ್ಯಸ್ಥರಿಂದ ಪ್ರಮಾಣ ಪತ್ರವನ್ನು ಪಡೆದು, ಆಯಾ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಇವರಿಂದ ದೃಢೀಕರಿಸಿಕೊಂಡಿರಬೇಕು. ಸದರಿ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು.

***17] ಅಭ್ಯರ್ಥಿಗಳ ಮಾಹಿತಿ ಸಂಬಂಧ ಆಕ್ಷೇಪಣೆ ಸ್ವೀಕರಿಸಿ ದಾಖಲಿಸುವುದು:***

ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳು, ಅರ್ಹತಾದಾಯಕ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳು ಹಾಗೂ ಅಭ್ಯರ್ಥಿಯು ಅರ್ಜಿಯಲ್ಲಿ ಕ್ಲೇಮು ಮಾಡಿರುವ ಮೀಸಲಾತಿ ವಿವರಗಳನ್ನು ಒಳಗೊಂಡ ಪೂರ್ಣ ಮಾಹಿತಿಯನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ಎಲ್ಲಾ ಅಭ್ಯರ್ಥಿಗಳ ವಿವರಗಳನ್ನು ಅಂದರೆ, ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳು, ಅರ್ಹತಾದಾಯಕ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳು ಹಾಗೂ ಆನ್‌ಲೈನ್ ಅರ್ಜಿಯಲ್ಲಿ ಕ್ಲೇಮು ಮಾಡಿರುವ ಮೀಸಲಾತಿ ವಿವರಗಳನ್ನು ಒಳಗೊಂಡ ಪೂರ್ಣ ಮಾಹಿತಿಯನ್ನು ಇಲಾಖಾ ವೆಬ್‌ಸೈಟ್ http://schooleducation.kar.nic.in ನಲ್ಲಿ ಪ್ರಕಟಿಸಿ, ನಿಗದಿತ ಸಮಯ ನೀಡಿ ಆಕ್ಷೇಪಣೆಗಳನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಗುವುದು. ಅಭ್ಯರ್ಥಿಯು ಆನ್‌ಲೈನ್ ಮೂಲಕ ಸಲ್ಲಿಸಿರುವ ಅರ್ಜಿಯಲ್ಲಿ ದಾಖಲಿಸಿದ ಶೈಕ್ಷಣಿಕ

ಮಾಹಿತಿಯಲ್ಲಿ ವ್ಯತ್ಯಾಸವಾಗಿದ್ದಲ್ಲಿ ಮಾತ್ರ ನಿಗದಿತ ನಮೂನೆಯಲ್ಲಿ ಆಕ್ಷೇಪಣೆಗಳನ್ನು ಸಲ್ಲಿಸಬೇಕಾಗುತ್ತದೆ. ಆದರೆ, ಮೂಲ ಅರ್ಜಿಯಲ್ಲಿ ದಾಖಲಿಸದಿರುವ ಯಾವುದೇ ಮಾಹಿತಿಯನ್ನು ಪರಿಗಣಿಸಲಾಗುವುದಿಲ್ಲ. ಆಕ್ಷೇಪಣೆಗಳನ್ನು ನಿಯಮಾನುಸಾರ ಪರಿಶೀಲಿಸಿ, ಅಭ್ಯರ್ಥಿಗಳು ನೀಡಿದ ಶೈಕ್ಷಣಿಕ ದಾಖಲೆಗಳ ಆಧಾರದ ಮೇಲೆ ಪರಿಷ್ಕರಿಸಿ, ಪುನಃ ಇಲಾಖಾ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು.

***18] ಆಯ್ಕೆ ಪಟ್ಟಿ ತಯಾರಿಸುವ ವಿಧಾನ:***

ಆಯ್ಕೆ ಪಟ್ಟಿಯನ್ನು ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇಲೆ ತಯಾರಿಸಲಾಗುತ್ತದೆ. ಅರ್ಹತೆ ಮತ್ತು ಮೀಸಲಾತಿ ಬಗ್ಗೆ ವಿವರಗಳನ್ನು ಈಗಾಗಲೇ ನೀಡಿದೆ. ಆಯ್ಕೆ ಪಟ್ಟಿಯನ್ನು ಎರಡು ಹಂತಗಳಲ್ಲಿ ತಯಾರಿಸಲಾಗುತ್ತದೆ.

- ***ಮೊದಲ ಹಂತ:*** ತಾತ್ಕಾಲಿಕ ಆಯ್ಕೆಪಟ್ಟಿ ಪ್ರಕಟಣೆ ಹಾಗೂ ಆಕ್ಷೇಪಣೆಗಳ ಆಹ್ವಾನ.
- ***ಎರಡನೇ ಹಂತ:*** ಮೂಲ ಪ್ರಮಾಣ ಪತ್ರಗಳ ಪರಿಶೀಲನೆ ಮತ್ತು ಅಂತಿಮ ಆಯ್ಕೆ ಪಟ್ಟಿ ಪ್ರಕಟಣೆ.

***ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಣೆ ಹಾಗೂ ಆಕ್ಷೇಪಣೆಗಳ ಆಹ್ವಾನ:***

ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿ ಅಭ್ಯರ್ಥಿಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗುತ್ತದೆ. ಆಕ್ಷೇಪಣೆಗಳನ್ನು ಸಲ್ಲಿಸಲು ಅಂತಿಮ ದಿನಾಂಕವನ್ನು ನಿಗದಿಪಡಿಸಲಾಗುತ್ತದೆ. ಈ ಬಗ್ಗೆ ಸೂಚನೆಯನ್ನು ದಿನಪತ್ರಿಕೆಗಳಲ್ಲಿ ನೀಡಲಾಗುತ್ತದೆ. ಅಭ್ಯರ್ಥಿಗಳು ತಮ್ಮ ಆಕ್ಷೇಪಣೆಗಳನ್ನು ನಿಗಧಿತ ದಿನಾಂಕದೊಳಗೆ ತಪ್ಪದೇ ಸಲ್ಲಿಸಬೇಕು. ನಂತರ ನೀಡಿದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ ಹಾಗೂ ಈ ಬಗ್ಗೆ ಯಾವುದೇ ಸೂಚನೆ ನೀಡುವುದಿಲ್ಲ. ಇದೇ ರೀತಿ ಯಾವುದೇ ಅಭ್ಯರ್ಥಿ ಆಕ್ಷೇಪಣೆಗಳನ್ನು ಸಲ್ಲಿಸದಿದ್ದಲ್ಲಿ ಅಂತಿಮ ಆಯ್ಕೆ ಪಟ್ಟಿಯಲ್ಲಿ ಯಾವುದೇ ರೀತಿಯ ಪರಿಹಾರಕ್ಕೆ ಅರ್ಹತೆ ಪಡೆಯುವುದಿಲ್ಲ. ಹಾಗೂ ಅಂತಿಮ ಆಯ್ಕೆಪಟ್ಟಿಯ ಪ್ರಕಟಣೆಯ ನಂತರ ಮತ್ತೆ ಅವರ ಅರ್ಹತೆಯ ಪರಿಶೀಲನೆಗಾಗಲೀ ಅಥವಾ ಇನ್ನಾವುದೇ ಬಗೆಯ ಪರಿಹಾರಕ್ಕಾಗಲೀ ಅರ್ಹತೆ ಪಡೆಯುವುದಿಲ್ಲ.

***19] ಅಂತಿಮ ಆಯ್ಕೆ ಪಟ್ಟಿ ಪ್ರಕಟಣೆ:***

- ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿದಾಗ ಪ್ರತಿ ಅಭ್ಯರ್ಥಿ ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಲ್ಲಿಸಬೇಕೆಂದು ಪ್ರಕಟಣೆಯಲ್ಲಿ ತಿಳಿಸಲಾಗಿರುತ್ತದೆ. ಇದರಂತೆ ಅಭ್ಯರ್ಥಿಗಳು ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಅರ್ಜಿ ಸ್ವೀಕೃತಿ ಮತ್ತು ಗುರುತಿನ ಪತ್ರದ ಪ್ರತಿ ಸಹಿತ ಪರಿಶೀಲನೆಗೆ ಸಲ್ಲಿಸಬೇಕು. ***ಅಭ್ಯರ್ಥಿಗಳಿಗೆ ಈ ಬಗ್ಗೆ ವೈಯಕ್ತಿಕವಾಗಿ ಸೂಚನೆ ನೀಡಲಾಗುವುದಿಲ್ಲ.*** ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಸಲ್ಲಿಸದಿರುವ / ಕೌನ್ಸಿಲಿಂಗ್‌ಗೆ ಗೈರು ಹಾಜರಾಗುವ / ಅಪೂರ್ಣ ದಾಖಲೆಗಳನ್ನು ಸಲ್ಲಿಸುವ ಅಭ್ಯರ್ಥಿಗಳು ಅಂತಿಮ ಆಯ್ಕೆಪಟ್ಟಿಯಲ್ಲಿ ಅವಕಾಶವನ್ನು ಕಳೆದುಕೊಳ್ಳುತ್ತಾರೆ.
- ಜಿಲ್ಲಾ ಮಟ್ಟದ ಅಂತಿಮ ಆಯ್ಕೆಪಟ್ಟಿಯಿಂದ ಬ್ಲಾಕ್ ಮಟ್ಟದ ಆಯ್ಕೆಪಟ್ಟಿಯನ್ನು ಅಭ್ಯರ್ಥಿಗಳು ಅರ್ಜಿಯಲ್ಲಿ ಸೂಚಿಸಿರುವ ಬ್ಲಾಕ್‌ಗಳ ಆದ್ಯತೆಯ ಆಧಾರದ ಮೇಲೆ ತಯಾರಿಸಲಾಗುತ್ತದೆ. ಅಭ್ಯರ್ಥಿಗಳು ಅರ್ಜಿಯಲ್ಲಿ ಬ್ಲಾಕ್‌ಗಳ ಆದ್ಯತೆಯನ್ನು ಸರಿಯಾಗಿ ನಮೂದಿಸಬೇಕು.
- ಬ್ಲಾಕ್ ಮಟ್ಟದ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಪ್ರಾಧಿಕಾರಿಗಳಾದ ಕ್ಷೇತ್ರ ಶಿಕ್ಷಣಾಧಿಕಾರಿಗಳು ಕೌನ್ಸಿಲಿಂಗ್ ಮೂಲಕ ನೇಮಕಾತಿ ಆದೇಶ ನೀಡುತ್ತಾರೆ.

***20] ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ವಿವರಗಳು:***

***ಅ. ಪರೀಕ್ಷೆಯ ಹೆಸರು:*** ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿಯರ ಹುದ್ದೆಗಳ ನೇಮಕಾತಿಗೆ ನಡೆಸುವ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಪ್ರತಿಯೊಂದಿಗೆ ಅಭ್ಯರ್ಥಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾಗುವುದು ಕಡ್ಡಾಯವಾಗಿರುತ್ತದೆ.

***ಆ. ಪರೀಕ್ಷೆ ನಡೆಸುವ ಪ್ರಾಧಿಕಾರ:*** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯನ್ನು ಆಯ್ಕೆ ಪ್ರಾಧಿಕಾರ ಹಾಗೂ ಉಪನಿರ್ದೇಶಕರು [ಆಡಳಿತ], ಸಾರ್ವಜನಿಕ ಶಿಕ್ಷಣ ಇಲಾಖೆ, ಇವರು ತಮ್ಮ ಶೈಕ್ಷಣಿಕ ಜಿಲ್ಲೆಯ ವ್ಯಾಪ್ತಿಯಲ್ಲಿ ನಡೆಸುವರು.

ಇ. ಪರೀಕ್ಷೆ ನಡೆಸುವ ದಿನಾಂಕ:24.03.2013.

***ಈ. ಪರೀಕ್ಷಾ ಅವದಿ ಹಾಗೂ ಸಮಯ:*** ಬೆಳಿಗ್ಗೆ 10.30 ರಿಂದ ಮಧ್ಯಾಹ್ನ 12.00ಗಂಟೆ.

***ಉ. ಪ್ರಶ್ನೆ ಪತ್ರಿಕೆಯಲ್ಲಿನ ವಿಷಯ ಹಾಗೂ ಅಂಕಗಳು:*** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಕೆಳಕಂಡ ಐದು ವಿಷಯಗಳನ್ನೊಳಗೊಂಡ ಒಂದು ಪ್ರಶ್ನೆ ಪತ್ರಿಕೆಯನ್ನು ಹೊಂದಿರುವುದು. ಪ್ರತಿ ವಿಷಯದಲ್ಲಿ ಒಂದು ಅಂಕದ 30 ಪ್ರಶ್ನೆಗಳಿದ್ದು, ಐದು ವಿಷಯಗಳಿಗೆ ಒಟ್ಟು 150 ಅಂಕಗಳನ್ನು ನಿಗದಿಪಡಿಸಲಾಗಿದೆ. ಪ್ರಸ್ತುತ ನಡೆಯುತ್ತಿರುವ ಪರೀಕ್ಷೆ ಎನ್.ಸಿ.ಟಿ.ಇ., ನಿಗದಿ ಪಡಿಸಿರುವ ಶಿಕ್ಷಕರ ಅರ್ಹತಾ ಪರೀಕ್ಷೆ ಸ್ವರೂಪವನ್ನು ಅನುಸರಿಸಿ ನಡೆಸಲಾಗುವುದು.

***ವಿಷಯ ಮತ್ತು ನಿಗದಿಪಡಿಸಿರುವ ಗರಿಷ್ಠ ಅಂಕಗಳ ವಿಂಗಡಣೆ ಕೆಳಗಿನಂತಿದೆ.***

| ಕ್ರ.ಸಂ | ವಿಷಯ | ಅಂಕಗಳು |
|---|---|---|
| 01. | ಶಿಶು ಮನೋವಿಜ್ಞಾನ ಮತ್ತು ವಿಕಸನ. | 30 |
| 02. | ಬಾಷೆ: ಕನ್ನಡ / ಉರ್ದು/ಮರಾಠಿ / ತಮಿಳು / ತೆಲಗು / ಮಲಯಾಳಂ | 30 |
| 03. | ಆಂಗ್ಲ ಭಾಷೆ | 30 |
| 04. | ಪರಿಸರ ಅಧ್ಯಯನ [ವಿಜ್ಞಾನ ಮತ್ತು ಸಮಾಜ ವಿಜ್ಞಾನ] | 30 |
| 05. | ಗಣಿತ | 30 |
| | **ಒಟ್ಟು** | **150** |

***21] ಪರೀಕ್ಷಾ ವಿಷಯಗಳಿಗೆ ನಿಗದಿಪಡಿಸಿರುವ ಪಠ್ಯವಸ್ತು: [ಎನ್.ಸಿ.ಟಿ.ಇ., ನಿಗಧಿಪಡಿಸಿರುವ ಪರೀಕ್ಷಾ ಪಠ್ಯ ಕ್ರಮದಂತೆ]***

*01.* ಭಾಷೆ : ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು, ಮಲಯಾಳಂ.

*02.* ಆಂಗ್ಲ ಭಾಷೆ, [4] ಪರಿಸರ ಅಧ್ಯಯನ [ವಿಜ್ಞಾನ ಮತ್ತು ಸಮಾಜ ವಿಜ್ಞಾನ] [5] ಗಣಿತ.

*03.* ಪ್ರಶ್ನೆಗಳ ವ್ಯಾಪ್ತಿ ಹಾಗೂ ಸ್ವರೂಪ.

*ಅ.* ಪ್ರಶ್ನೆಗಳು ನಿಗದಿಪಡಿಸಲಾಗಿರುವ ಪಠ್ಯವಸ್ತುವಿನ ವ್ಯಾಪ್ತಿಯಲ್ಲಿ ಬರುತ್ತದೆ.

*ಆ.* ಪ್ರಶ್ನಗಳು ವಸ್ತುನಿಷ್ಠವಾಗಿದ್ದು ಪ್ರತಿ ಪ್ರಶ್ನೆಗೆ ಒಂದು ಅಂಕ ನಿಗದಿಪಡಿಸಿದೆ.

*ಇ.* ಪ್ರತಿ ಪ್ರಶ್ನೆ ನಾಲ್ಕು ಉತ್ತರಗಳನ್ನು ಹೊಂದಿದ್ದು, ಇವುಗಳಲ್ಲಿ ಒಂದು ಸರಿ ಉತ್ತರವಾಗಿರುತ್ತದೆ.

*ಈ.* ಉತ್ತರಗಳನ್ನು 'ಓ.ಎಂ.ಆರ್' ಶೀಟಿನಲ್ಲಿ ಗುರುತಿಸುವುದು.

*ಉ.* ಪ್ರಶ್ನೆ ಪತ್ರಿಕೆಗಳು ಪ್ರತಿ ಮಾಧ್ಯಮದ ಹುದ್ದೆಗಳಿಗೆ ಆಯಾ ಮಾಧ್ಯಮದ ಭಾಷೆಗಳಲ್ಲಿ ಇರುತ್ತದೆ.

***22] ಪ್ರಮುಖವಾದ ಸೂಚನೆಗಳು:***

*01.* ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿಗಳನ್ನು ಸಲ್ಲಿಸಬೇಕು. ನಿಗದಿತ ನಮೂನೆಯಲ್ಲಿ ಸಲ್ಲಿಸದ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಮತ್ತು ಆಯ್ಕೆಗೆ ಪರಿಗಣಿಸುವುದಿಲ್ಲ. ಅಭ್ಯರ್ಥಿಗಳು ಪ್ರವೇಶ ಪತ್ರವನ್ನು ಆನ್‌ಲೈನ್ ಮೂಲಕವೇ ಪಡೆಯತಕ್ಕದ್ದು. ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಹಾಜರಾದ ಮಾತ್ರಕ್ಕೆ ಅಭ್ಯರ್ಥಿ ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಭ್ಯರ್ಥಿಯು ಇದರ ಜೊತೆಗೆ ಆಯಾ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿ ಹೊಂದಿರತಕ್ಕದ್ದು.

*02.* ಅರ್ಜಿಗಳನ್ನು ದಿನಾಂಕ:02.03.2013ರ ಸಂಜೆ 5.30ರೊಳಗೆ ಆನ್‌ಲೈನ್ ಮೂಲಕವೇ ಸಲ್ಲಿಸಬೇಕು. ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ. ಅಂಚೆ ಮೂಲಕ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

*03.* ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಸಮಯಕ್ಕೆ ***ಎಲ್ಲಾ ಪ್ರಮಾಣ ಪತ್ರಗಳನ್ನು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕದ ಮೊದಲೇ ಪಡೆದಿರಬೇಕು.*** ಆದರೆ, ತಾತ್ಕಾಲಿಕ ಆಯ್ಕೆಪಟ್ಟಿಯ ಪ್ರಕಟಣೆಯ ನಂತರ ಆಯ್ಕೆ ಹೊಂದಿದ್ದಲ್ಲಿ ಅಥವಾ ಆಕ್ಷೇಪಣೆ ನೀಡುವ ಹಂತದಲ್ಲಿ ಎಲ್ಲಾ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಆಯ್ಕೆ ಪ್ರಾಧಿಕಾರಕ್ಕೆ ಸಲ್ಲಿಸಬೇಕು.

*04.* ಅಭ್ಯರ್ಥಿಗಳು ಪಾಸ್‌ಪೋರ್ಟ್ ಅಳತೆಯ ಇತ್ತೀಚಿನ ಭಾವಚಿತ್ರವನ್ನು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವ ಸಮಯದಲ್ಲಿ ಅರ್ಜಿ ನಮೂನೆಯಲ್ಲಿ ನಿಗದಿಪಡಿಸಿರುವ ಸ್ಥಳದಲ್ಲಿಯೇ ಸ್ಕ್ಯಾನ್ ಮಾಡಿ ಸಲ್ಲಿಸುವುದು.

*05.* ಪ್ರಮಾಣ ಪತ್ರಗಳು ಪರಿಶೀಲನೆಯ ಸಮಯದಲ್ಲಿ ***ಸುಳ್ಳು ದಾಖಲೆ ಅಥವಾ ಸುಳ್ಳು ಮಾಹಿತಿ ನೀಡಿರುವುದು ಕಂಡುಬಂದಲ್ಲಿ ಅಂತಹ ಅಭ್ಯರ್ಥಿಗಳು ಆಯ್ಕೆಯಾಗುವ ಅವಕಾಶವನ್ನು ಕಳೆದುಕೊಳ್ಳುತ್ತಾರೆ.***

*06.* ಆಯ್ಕೆಪಟ್ಟಿಯಲ್ಲಿ ಸೇರ್ಪಡೆಯಾದ ಮಾತ್ರಕ್ಕೆ ಅಭ್ಯರ್ಥಿಗಳ ನೇಮಕಾತಿಗೆ ಹಕ್ಕನ್ನು ಪಡೆದುಕೊಳ್ಳುವುದಿಲ್ಲ.

*07.* ಮೇಲಿನ ನೇಮಕಾತಿಗಳು ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಆದೇಶಗಳು ಮತ್ತು ತಿದ್ದುಪಡಿಗೆ ಒಳಪಟ್ಟಿರುತ್ತದೆ.

*08.* ಯಾವುದೇ ಹಂತದಲ್ಲಿ ತಪ್ಪು ಮಾಹಿತಿಯ ಆಧಾರದ ಮೇಲೆ ಆಯ್ಕೆಯಾದ ಅಥವಾ ಅನರ್ಹತೆಯ ಕಾರಣಗಳಿಗಾಗಿ ಅಭ್ಯರ್ಥಿಯ ಹೆಸರನ್ನು ಪಟ್ಟಿಯಿಂದ ಕೈಬಿಡುವ ಅಥವಾ ನೇಮಕಾತಿ ಆದೇಶವನ್ನು ರದ್ದುಗೊಳಿಸುವ ಅಧಿಕಾರವನ್ನು ಇಲಾಖೆಯು ಕಾಯ್ದಿರಿಸಿಕೊಂಡಿರುತ್ತದೆ.

*09.* ಆಯ್ಕೆಯಾದ ಅಭ್ಯರ್ಥಿಯು ತಾನು ನೇಮಕಗೊಂಡ ಜೇಷ್ಠತಾ ಘಟಕ [ತಾಲ್ಲೂಕು]ದಲ್ಲಿ ಮಾತ್ರ ಸೇವೆ ಸಲ್ಲಿಸಬೇಕಾಗಿರುತ್ತದೆ.

*10.* ಅಭ್ಯರ್ಥಿಗಳು ಅವರ ಅರ್ಜಿಗಳಲ್ಲಿ ಭರ್ತಿ ಮಾಡಿರುವ ಮಾಹಿತಿಗಳ ಆಧಾರದ ಮೇಲೆ ಅವರಿಗೆ ಸ್ಪರ್ಧಾತ್ಮಕ ಪರೀಕ್ಷೆ ಬರೆಯಲು ಪ್ರವೇಶ ಪತ್ರಗಳನ್ನು ನೀಡುತ್ತದೆ. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಅಂಕಗಳ ಮಾಹಿತಿ, ಮೀಸಲಾತಿ, ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಪೂರ್ಣ ಮಾಹಿತಿ ನೀಡದ ಅಥವಾ ತಪ್ಪು ಮಾಹಿತಿ ನೀಡಿದ ಸಂದರ್ಭಗಳಲ್ಲಿ ಮುಂದಿನ ಆಗುಹೋಗುಗಳಿಗೆ ಅಭ್ಯರ್ಥಿಗಳೇ ಜವಾಬ್ದಾರರು.

*11.* ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಹಾಗೂ ವಯೋಮಿತಿ ಸಡಿಲಿಕೆ ಇತ್ಯಾದಿಗಳಿಗೆ ಸಂಬಂಧಿತ ವಿವರಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು. ಈ ಬಗ್ಗೆ ಅನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಮನವಿ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.

*12.* ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

*13.* ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವಾಗ ಪ್ರವೇಶ ಪತ್ರ, ಸ್ವೀಕೃತಿ ಪತ್ರ ಹಾಗೂ ಇತರೆ ದಾಖಲೆಗಳನ್ನು ಆಯ್ಕೆ ಪ್ರಕ್ರಿಯೆ ಮುಗಿಯುವ ತನಕ ಸುರಕ್ಷಿತವಾಗಿ ಇಟ್ಟುಕೊಳ್ಳತಕ್ಕದ್ದು. ಈ ಅರ್ಜಿಯನ್ನು ಭರ್ತಿ ಮಾಡುವ ವಿಧಾನ, ಮೀಸಲಾತಿ ಪ್ರಮಾಣ ಪತ್ರಗಳ ನಮೂನೆ, ಮೀಸಲಾತಿಯ

[Horizontal and vertical Reservations] ವಿವರ ಹಾಗೂ ಸರ್ಕಾರಿ ಆದೇಶಗಳ ಬಗ್ಗೆ ಮಾಹಿತಿ ನೀಡಲಾಗಿದ್ದು, ಅಭ್ಯರ್ಥಿಗಳು ಅವುಗಳನ್ನು ಗಮನವಿಟ್ಟು ಓದಿಕೊಳ್ಳತಕ್ಕದ್ದು.

*14.* ದುರ್ನಡತೆ: ಒಬ್ಬ ಅಭ್ಯರ್ಥಿಯು ನಕಲು ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂಬ ಬಗ್ಗೆ ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ಆಯ್ಕೆ ಪ್ರಾಧಿಕಾರದಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದೇ ಅಲ್ಲದೇ, ಆಯ್ಕೆ ಪ್ರಾಧಿಕಾರವು ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

*15.* ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿದ ನಂತರ ಅಭ್ಯರ್ಥಿಗಳು ಆಕ್ಷೇಪಣೆ ಸಲ್ಲಿಸುವಾಗ ಮೂಲ ಅರ್ಜಿಯಲ್ಲಿ ದಾಖಲಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ಸಲ್ಲಿಸಬಹುದು. [ಅರ್ಜಿಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ] ನಮೂದಿಸಲು ಬಿಟ್ಟುಹೋಗಿದ್ದ ಯಾವುದೇ ಮಾಹಿತಿಯನ್ನು ಹೊಸದಾಗಿ ದಾಖಲಿಸಲು ಬಯಸುವ ಮಾಹಿತಿಗಳನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ಆಕ್ಷೇಪಣೆ ಮತ್ತು ಲಗತ್ತುಗಳನ್ನು ಪರಿಗಣಿಸದೇ ತಿರಸ್ಕರಿಸಲಾಗುವುದು.

*16.* ಅರ್ಜಿ ನಮೂನೆ, ಉತ್ತರ ಪತ್ರಿಕೆ, ಪ್ರವೇಶ ಪತ್ರಗಳ ನಿಗದಿತ ಸ್ಥಳಗಳಲ್ಲಿ ಎಡಗೈ ಹೆಬ್ಬೆಟ್ಟು ಗುರುತನ್ನು ಸ್ಪಷ್ಟವಾಗಿ ಹಾಕಬೇಕು. ಎಡಗೈ ಹೆಬ್ಬೆರಳ ಗುರುತು ರಹಿತ ಅರ್ಜಿಯನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸಲಾಗುವುದು.

*17.* ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ನಂತರ ಪ್ರವೇಶ ಪತ್ರದ ಪ್ರತಿಯನ್ನು ದ್ವಿಪ್ರತಿಯಲ್ಲಿ ಡೌನ್‌ಲೋಡ್ ಮಾಡಿಕೊಂಡು ಆ ಪ್ರತಿಗಳಲ್ಲಿ ಒಂದೇ ಮಾದರಿಯ ಇತ್ತೀಚಿನ ತಲಾ ಒಂದು ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು.

*18.* ನೇಮಕಾತಿ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೆ ಈ ಸಂಬಂಧ ಆಯ್ಕೆ ಪ್ರಾಧಿಕಾರಿ / ನೇಮಕಾತಿ ಪ್ರಾಧಿಕಾರಿಗಳು ನೀಡುವ ಸೂಚನೆಗಳನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್ [http://schooleducation.kar.nic.in] ನಲ್ಲಿ ಅವಲೋಕಿಸುವುದು.

*19.* ಈ ಪರೀಕ್ಷೆಯನ್ನು ಶಿಕ್ಷಕರ ಅರ್ಹತಾ ಪರೀಕ್ಷೆಯೆಂದು ಪರಿಗಣಿಸಲಾಗುವುದು. ನಿಗದಿತ ಅರ್ಹತೆ ಪಡೆದಿರುವವರಿಗೆ ಕ್ರಮ ಸಂಖ್ಯೆ 2 ರಲ್ಲಿ ತಿಳಿಸಿರುವಂತೆ ಅರ್ಹತಾ ಪ್ರಮಾಣ ಪತ್ರ ನೀಡಲಾಗುವುದು. ಮುಂದಿನ ನೇಮಕಾತಿಗಳಿಗೂ ಸಹ ಈ ಪ್ರಮಾಣ ಪತ್ರವನ್ನು ಉಪಯೋಗಿಸಬಹುದಾಗಿದೆ.

ಹೆಚ್ಚಿನ ವಿವರಗಳಿಗೆ ಆನ್‌ಲೈನ್‌ನಲ್ಲಿ ನೀಡಿರುವ ಸೂಚನೆಗಳನ್ನು ಗಮನಿಸಬೇಕು. ಹಾಗೂ ಯಾವುದೇ ಹೆಚ್ಚಿನ ಸ್ಪಷ್ಟೀಕರಣಕ್ಕೆ ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಇವರ ಕಛೇರಿಯನ್ನು ಸಂಪರ್ಕಿಸಬಹುದು.

ಆಯ್ಕೆ ಪ್ರಾಧಿಕಾರಿ ಹಾಗೂ ಜಿಲ್ಲಾ ಉಪನಿರ್ದೇಶಕರು,
ಸಾರ್ವಜನಿಕ ಶಿಕ್ಷಣ ಇಲಾಖೆ,
ದಕ್ಷಿಣ ಕನ್ನಡ ಜಿಲ್ಲೆ.

***ದಕ್ಷಿಣ ಕನ್ನಡ ಜಿಲ್ಲೆಯ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗೆ ಪ್ರಕಟಿಸಲಾದ ಖಾಲಿ ಹುದ್ದೆಗಳ ವರ್ಗೀಕರಣ.***

***ವಿಷಯ : ಕನ್ನಡ***

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | ಒಟ್ಟು |
|---|---|---|---|---|---|---|---|---|---|---|---|---|---|
| | | | | ಗುಂಪುವಾರು | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2-ಎ | 2-ಬಿ | 3-ಎ | 3-ಬಿ | ಸಾಮಾನ್ಯ | |
| ಬಂಟ್ವಾಳ | 0 | 14 | 14 | ಇತರೆ | 2 | | | 2 | 1 | | 1 | 4 | 10 |
| | | | | ಗ್ರಾ.ಅ | 1 | | | | | | | 2 | 3 |
| | | | | ಅಂಗವಿಕಲ | | | | | | | | 1 | 1 |
| | | | | ಮಾ.ಸೈನಿಕ | | | | | | | | | |
| | | | | ಕ.ಮಾ.ಅ | | | | | | | | | |
| | | | | ಯೋ.ನಿ.ಅ | | | | | | | | | |
| **ಒಟ್ಟು** | | **14** | **14** | | **3** | | | **2** | **1** | | **1** | **7** | **14** |

*ವಿಷಯ : ಕನ್ನಡ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | ಒಟ್ಟು |
|---|---|---|---|---|---|---|---|---|---|---|---|---|---|
| | | | | ಗುಂಪುವಾರು | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2-ಎ | 2-ಬಿ | 3-ಎ | 3-ಬಿ | ಸಾಮಾನ್ಯ | |
| ಬೆಳ್ತಂಗಡಿ | 0 | 10 | 10 | ಇತರೆ | 1 | 1 | | 1 | | 1 | 1 | 3 | 8 |
| | | | | ಗ್ರಾ.ಅ | | | | | | | | 1 | 1 |
| | | | | ಅಂಗವಿಕಲ | | | | | | | | 1 | 1 |
| | | | | ಮಾ.ಸೈನಿಕ | | | | | | | | | 0 |
| | | | | ಕ.ಮಾ.ಅ | | | | | | | | | 0 |
| | | | | ಯೋ.ನಿ.ಅ | | | | | | | | | 0 |
| **ಒಟ್ಟು** | | | | **ಒಟ್ಟು** | **1** | **1** | **0** | **1** | **0** | **1** | **1** | **5** | **10** |

*ವಿಷಯ : ಕನ್ನಡ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | ಒಟ್ಟು |
|---|---|---|---|---|---|---|---|---|---|---|---|---|---|
| | | | | ಗುಂಪುವಾರು | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2-ಎ | 2-ಬಿ | 3-ಎ | 3-ಬಿ | ಸಾಮಾನ್ಯ | |
| ಪುತ್ತೂರು | 0 | 10 | 10 | ಇತರೆ | 1 | 1 | | 1 | | 1 | 1 | 3 | 8 |
| | | | | ಗ್ರಾ.ಅ | | | | | | | | 1 | 1 |
| | | | | ಅಂಗವಿಕಲ | | | | | | | | 1 | 1 |
| | | | | ಮಾ.ಸೈನಿಕ | | | | | | | | | |
| | | | | ಕ.ಮಾ.ಅ | | | | | | | | | |
| | | | | ಯೋ.ನಿ.ಅ | | | | | | | | | |
| **ಒಟ್ಟು** | | | | **ಒಟ್ಟು** | **1** | **1** | | **1** | | **1** | **1** | **5** | **10** |

*ವಿಷಯ : ಕನ್ನಡ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | ಒಟ್ಟು |
|---|---|---|---|---|---|---|---|---|---|---|---|---|---|
| | | | | ಗುಂಪುವಾರು | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2-ಎ | 2-ಬಿ | 3-ಎ | 3-ಬಿ | ಸಾಮಾನ್ಯ | |
| ಸುಳ್ಯ | 0 | 6 | 6 | ಇತರೆ | 1 | | | 1 | | 1 | | 2 | 5 |
| | | | | ಗ್ರಾ.ಅ | | | | | | | | 1 | 1 |
| | | | | ಅಂಗವಿಕಲ | | | | | | | | | 0 |
| | | | | ಮಾ.ಸೈನಿಕ | | | | | | | | | 0 |
| | | | | ಕ.ಮಾ.ಅ | | | | | | | | | 0 |
| | | | | ಯೋ.ನಿ.ಅ | | | | | | | | | 0 |
| **ಒಟ್ಟು** | | **6** | **6** | | **1** | **0** | **0** | **1** | **0** | **1** | **0** | **3** | **6** |

*ವಿಷಯ : ವಿಜ್ಞಾನ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | ಒಟ್ಟು |
|---|---|---|---|---|---|---|---|---|---|---|---|---|---|
| | | | | ಗುಂಪುವಾರು | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2-ಎ | 2-ಬಿ | 3-ಎ | 3-ಬಿ | ಸಾಮಾನ್ಯ | |
| ಬಂಟ್ವಾಳ | 0 | 11 | 11 | ಇತರೆ | 2 | | | 2 | | 1 | 1 | 3 | 9 |
| | | | | ಗ್ರಾ.ಅ | | | | | | | | 1 | 1 |
| | | | | ಅಂಗವಿಕಲ | | | | | | | | 1 | 1 |
| | | | | ಮಾ.ಸೈನಿಕ | | | | | | | | | |
| | | | | ಕ.ಮಾ.ಅ | | | | | | | | | |
| | | | | ಯೋ.ನಿ.ಅ | | | | | | | | | |
| **ಒಟ್ಟು** | | **11** | **11** | | **2** | **0** | **0** | **2** | **0** | **1** | **1** | **5** | **11** |

*ವಿಷಯ : ವಿಜ್ಞಾನ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | ಒಟ್ಟು |
|---|---|---|---|---|---|---|---|---|---|---|---|---|---|
| | | | | ಗುಂಪುವಾರು | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2-ಎ | 2-ಬಿ | 3-ಎ | 3-ಬಿ | ಸಾಮಾನ್ಯ | |
| ಬೆಳ್ತಂಗಡಿ | 0 | 8 | 8 | ಇತರೆ | 1 | | | 2 | | 1 | | 2 | 6 |
| | | | | ಗ್ರಾ.ಅ | | | | | | | | 1 | 1 |
| | | | | ಅಂಗವಿಕಲ | | | | | | | | 1 | 1 |
| | | | | ಮಾ.ಸೈನಿಕ | | | | | | | | | 0 |
| | | | | ಕ.ಮಾ.ಅ | | | | | | | | | 0 |
| | | | | ಯೋ.ನಿ.ಅ | | | | | | | | | 0 |
| **ಒಟ್ಟು** | | | | **ಒಟ್ಟು** | **1** | **0** | **0** | **2** | **0** | **1** | **0** | **4** | **8** |

*ವಿಷಯ : ವಿಜ್ಞಾನ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿಗಳ ವರ್ಗೀಕರಣ | | | | | | | | | ಒಟ್ಟು |
|---|---|---|---|---|---|---|---|---|---|---|---|---|---|
| | | | | ಗುಂಪುವಾರು | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2-ಎ | 2-ಬಿ | 3-ಎ | 3-ಬಿ | ಸಾಮಾನ್ಯ | |
| ಪುತ್ತೂರು | 0 | 8 | 8 | ಇತರೆ | 1 | | | 1 | 1 | 1 | | 2 | 6 |
| | | | | ಗ್ರಾ.ಅ | | | | | | | | 1 | 1 |
| | | | | ಅಂಗವಿಕಲ | | | | | | | | 1 | 1 |
| | | | | ಮಾ.ಸೈನಿಕ | | | | | | | | | |
| | | | | ಕ.ಮಾ.ಅ | | | | | | | | | |
| | | | | ಯೋ.ನಿ.ಅ | | | | | | | | | |
| **ಒಟ್ಟು** | | | | | **1** | | | **1** | **1** | **1** | | **4** | **8** |

| | | | |
|---|---|---|---|
| *06.* | ಮಹಿಳಾ ಅಭ್ಯರ್ಥಿಗಳಿಗೆ | ಶೇಕಡಾ–50 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:41:ಎಸ್‌ಆರ್‌ಇ:2001, ದಿನಾಂಕ:09.08.2001ರ ಪ್ರಕಾರ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರಲಾಗಿದ್ದು, ಮಹಿಳೆಯರಿಗೆ ಪ್ರತಿ ಗುಂಪಿನಲ್ಲೂ ಶೇಕಡಾ 50% ಹುದ್ದೆಗಳನ್ನು ಮೀಸಲಿಸಲಾಗಿದೆ. ಮತ್ತು ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿನಾಂಕ:01.04.2008. |

***11] ಮಾಜಿ ಸೈನಿಕ ಅಭ್ಯರ್ಥಿಗಳು:***

"ಮಾಜಿ ಸೈನಿಕ"ರಿಗಾಗಿ ಮೀಸಲಿಟ್ಟ ಖಾಲಿ ಹುದ್ದೆಗಳನ್ನು ಮಿಲಿಟರಿ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿಗಳಿಂದ ಮತ್ತು ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರಿಂದ ನೇಮಕಾತಿ ಮೂಲಕ ತುಂಬಲಾಗುತ್ತದೆ.

***ಮಾಜಿ ಸೈನಿಕರ ಗುಂಪಿನಲ್ಲಿ ಕೆಳಕಂಡವರು ಆಯ್ಕೆಗೆ ಅರ್ಹರು:***

***01. ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ [ಯೋಧ ಅಥವಾ ಅಯೋಧನಾಗಿ] ಸೇವೆ ಸಲ್ಲಿಸಿದ ವ್ಯಕ್ತಿ. ಅಂದರೆ:***

*[ಅ]* ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ವ್ಯಕ್ತಿ.

***ಅಥವಾ***

*[ಆ]* ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ಅನರ್ಹನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಿಂದ ಬಿಡುಗಡೆಯಾದ ವ್ಯಕ್ತಿ.

***ಅಥವಾ***

*[ಇ]* ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

***ಅಥವಾ***

*[ಈ]* ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಠ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ.

***02. ಮಾಜಿ ಸೈನಿಕ ಅವಲಂಬಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅಂದರೆ:***

ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು. [ಸಂಬಂಧಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು, ಮಾಜಿ ಸೈನಿಕರ ಅವಲಂಬಿತರಡಿಯಲ್ಲಿ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ, ಅಂತಹವರಿಗೆ ವಯೋಮಿತಿ ಸಡಿಲಿಕೆ ಇಲ್ಲ]

***03. ಮಾಜಿ ಸೈನಿಕ ಗುಂಪಿನಲ್ಲಿ ಆಯ್ಕೆ ಹೊಂದಲು ಈ ಕೆಳಕಂಡವರು ಅರ್ಹರಲ್ಲ:***

[ಅ] ಈ ಸೌಲಭ್ಯಕ್ಕೆ ಡಿಫೆನ್ಸ್ ಸೆಕ್ಯುರಿಟಿ ಕೋರ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಕೋರ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಅರ್ಹರಲ್ಲ.

[ಆ] ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

***ಸೂಚನೆ:***

***"ಮಾಜಿ ಸೈನಿಕ" "ಸಶಸ್ತ್ರ ದಳದ ಸದಸ್ಯ" ಮತ್ತು "ಕುಟುಂಬದ ಸದಸ್ಯ"*** ಎಂಬ ಪದಗಳ ಅರ್ಥವು ಕಾಲದಿಂದ ಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ [ಸಾಮಾನ್ಯ ನೇಮಕಾತಿ] ನಿಯಮಗಳು–1977ರಲ್ಲಿ ವಿವರಿಸಿರುವಂತೆ ಇರುತ್ತದೆ.

***12] ಅಂಗವಿಕಲ ಅಭ್ಯರ್ಥಿಗಳು:***

ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಎಂಎಂಡಬ್ಲ್ಯೂ:107:ಪಿಹೆಚ್‌ಪಿ:2003, ದಿ:11.07.2003 ಮತ್ತು ಸಂಖ್ಯೆ:ಡಿಪಿಎಆರ್:50:ಎಸ್‌ಆರ್‌ಆರ್:2000 ದಿ:30.09.2005ರ ಅನ್ವಯ ತಾನು "ಅಂಗವಿಕಲರ ಗುಂಪಿಗೆ ಸೇರಿದವರೆಂದು ಹೇಳಿಕೊಳ್ಳುವ ಅಭ್ಯರ್ಥಿಯು" ವೈದ್ಯಕೀಯ ಪ್ರಮಾಣ ಪತ್ರವನ್ನು ಹೊಂದಿರಬೇಕು. ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್:ಸಿಆಸು:50:ಎಸ್‌ಆರ್‌ಆರ್:2007, ದಿ:26.07.2011ರಲ್ಲಿ ನಿಗದಿಪಡಿಸಿರುವ ಅಂಗವಿಕಲ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗುವುದು. ಸರ್ಕಾರಿ ಆದೇಶ ಸಂಖ್ಯೆ:ಎಂ.ಎ.ಇ:107:ಪಿಹೆಚ್‌ಪಿ:2003 ದಿ:11.07.2003ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಕ್ಷಮ ಜಿಲ್ಲಾ ವೈದ್ಯಕೀಯ ಮಂಡಳಿಯಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:50:ಎಸ್‌ಆರ್‌ಆರ್:2007, ದಿ:26.07.2011ರಲ್ಲಿ ರಾಜ್ಯ ಸರ್ಕಾರವು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿದೆ. ಸದರಿ ಅಧಿಸೂಚನೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅಂಗವಿಕಲ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳ ಉದ್ಧೃತ ಭಾಗವನ್ನು ಈ ಕೆಳಗೆ ನೀಡಲಾಗಿದೆ.

| Blind | Low Vision | Leprosy Cured | Hearing Impaired | Locomotors Disability | Mentally ill | Mentally Retarded |
|---|---|---|---|---|---|---|
| Primary School Music Teacher,<br><br>Secondary School Assistant Grade-II, Assistant Masters [Arts] [Languages] Special Teacher Grade-II, Drama Teachers, Dance Teachers, Music Teachers.<br><br>FDA., SDA., | Primary School Music Teacher, Asst.Masters [General] [English] [Hindi]<br><br>Secondary School Assistant Grade-II, Assistant Masters [Arts] [Languages] Special Teacher Grade-II, Drama Teachers, Dance Teachers, Music Teachers.<br><br>FDA., SDA., Group D, Posts, Peon. | Primary School Assistant Masters [General] [Science] [English] [Hindi] Drawing Teacher<br><br>Secondary School Assistant Grade-II, Assistant Masters [Arts] [Physical Science] [Biological Science] [Languages]<br><br>Special Teacher Grade-II, Drawing Teachers, Drama Teachers, Dance Teachers, Craft Teachers, Music Teachers.<br><br>FDA., SDA., Typist, Steno & Group D., | Primary School Music Teacher, Asst.Masters [General] [English] [Hindi] Drawing Teachers.<br><br>Secondary School Assistant Grade-II, Assistant Masters [Languages] Physical Education Teacher, Grade-II, Drawing Teachers, Drama Teachers, Dance Teachers, Craft Teachers.<br><br>FDA., SDA., Typist, & Group D., | Primary School Assistant Masters [General] [Science] [English] [Hindi] Drawing Teacher<br><br>Secondary School Assistant Grade-II, Assistant Masters [Arts] [Physical Science] [Biological Science] [Languages]<br><br>Special Teacher Grade-II, Drawing Teachers, Drama Teachers, Dance Teachers, Craft Teachers, Music Teachers.<br><br>FDA., SDA., Typist, Steno & Group D Posts. | FDA., SDA., & Group D Posts. | - |

- ದೈಹಿಕ ಅಂಗವಿಕಲ ಅಭ್ಯರ್ಥಿಗಳು ಸರ್ಕಾರಿ ಜಿಲ್ಲಾ ಆಸ್ಪತ್ರೆಗಳಲ್ಲಿರುವ ಮೂಳೆ ತಜ್ಞ [Orthopaedic Surgeon] ರಿಂದ ದೈಹಿಕ ಅಂಗವಿಕಲತೆಯ ಮೌಲೀಕರಣವನ್ನು Alimco Kanpur [W.H.O Standard] ಇದರ ಆಧಾರದ ಮೇಲೆ ಮಾಡಿಸುವುದು ಕಡ್ಡಾಯವಾಗಿರುತ್ತದೆ. ಹಾಗೂ ಶ್ರವಣ ದೋಷ ಹೊಂದಿರುವ ಅಂಗವಿಕಲ ಅಭ್ಯರ್ಥಿಗಳ ಪ್ರಮಾಣ ಪತ್ರದಲ್ಲಿ ಶ್ರವಣ ದೋಷದ ಪ್ರಮಾಣವನ್ನು ಡೆಸಿಬಲ್ಸ್ [Decibels] ಗಳಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು.

***13] ಗ್ರಾಮೀಣ ಅಭ್ಯರ್ಥಿಗಳು:***

ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರ ನಿಯಮಗಳ ಅಧಿನಿಯಮ–1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964ರಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶ ಹೊರತಾಗಿ ಇತರೆ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಅಭ್ಯರ್ಥಿ.

ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸಂಬಂಧಿಸಿದ ಪ್ರಮಾಣ ಪತ್ರಗಳನ್ನು ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್:96:ಸೇನೆನಿ:2005, ದಿನಾಂಕ:10.08.2005ರಲ್ಲಿ ನೀಡಿರುವ ನಿಗದಿತ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು.

- ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–1ರಲ್ಲಿ ಅಂದರೆ, ಮೇಲುಸ್ಥರದಲ್ಲಿ [creamy layer] ಬರುವುದಿಲ್ಲವೆಂದು ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದ ಪ್ರಮಾಣ ಪತ್ರದ ಜೊತೆಗೆ ಸರ್ಕಾರದ ಆದೇಶ ದಿನಾಂಕ:10.08.2005ರಲ್ಲಿ ನಿಗದಿಪಡಿಸಲಾದ ನಮೂನೆ–2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
- ಪ್ರವರ್ಗ–1, 2.ಎ., 2.ಬಿ., 3.ಎ., 3.ಬಿ., ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಸರ್ಕಾರದ ಆದೇಶ ದಿನಾಂಕ:10.08.2005ರಲ್ಲಿ ನಿಗದಿ ಪಡಿಸಲಾದ ನಮೂನೆ–2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಪಡೆದಿರಬೇಕು.

***14] ಯೋಜನಾ ನಿರಾಶ್ರಿತ ಕುಟುಂಬದ ಅಭ್ಯರ್ಥಿಗಳು:***

ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:23:ಎಸ್ಆರ್ಆರ್:1999, ದಿನಾಂಕ:23.11.2000ರನ್ವಯ ಯೋಜನಾ ನಿರಾಶ್ರಿತ ಕುಟುಂಬದ ಅಭ್ಯರ್ಥಿ ಮೀಸಲಾತಿ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ:ಸಿಆಸುಇ:44:ಸೇನೇನಿ, ದಿನಾಂಕ:27.07.2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ [ತಹಸೀಲ್ದಾರ್] ಅರ್ಜಿ ಸಲ್ಲಿಸುವ ಕೊನೆ ದಿನಾಂದೊಳಗೆ ಪಡೆದಿರಬೇಕು.

***ಯೋಜನೆ ಅಂದರೆ:***

ನಿರಾಶ್ರಿತ ವ್ಯಕ್ತಿಗಳಿಂದ ಪಡೆಯಲಾದ ಜಮೀನನ್ನು ನಿರ್ಮಾಣ ಅಥವಾ ನೀರಾವರಿಯ ಉದ್ದೇಶಕ್ಕಾಗಿ ಅಥವಾ ನೀರು ಸರಬರಾಜು ಮಾಡುವ ಅಭಿವೃದ್ಧಿ ಕಾರ್ಯದ ವಿಸ್ತರಣೆ ಅಥವಾ ವಿದ್ಯುಚ್ಛಕ್ತಿ ಉತ್ಪಾದನೆ ಮತ್ತು ಪೂರೈಕೆ ಅಥವಾ ವಿದ್ಯುಚ್ಛಕ್ತಿ ಕಾರ್ಯಗಳ ಅನುಕೂಲಕರ ಅಭಿವೃದ್ಧಿಯೂ ಸೇರಿದಂತೆ ಸಾರ್ವಜನಿಕ ಉಪಯೋಗಗಳಿಗಾಗಿ ನಿರ್ಮಾಣ ಸುಧಾರಣೆ ಅಥವಾ ಅಭಿವೃದ್ಧಿ ಕಾರ್ಯಗಳ ಯೋಜನೆ.

***ವಿಶೇಷ ಸೂಚನೆ:***

ಈ ಮೇಲ್ಕಂಡ ನಿಯಮಗಳು ಪ್ರಾರಂಭವಾಗುವುದಕ್ಕಿಂತ 20 ವರ್ಷಗಳ ಮುಂಚಿತವಾಗಿ ಯಾವುದೇ ಗ್ರಾಮೀಣದಲ್ಲಿನ ಅಥವಾ ಪ್ಲಾಟ್ ಅಥವಾ ಇನ್ನಿತರ ಯಾವುದೇ ಆಸ್ತಿಗಳನ್ನು ಹೊಂದಿದ್ದು, ಅಂತಹ ಆಸ್ತಿಗಳನ್ನು ಯೋಜನೆಗಳ ಉದ್ದೇಶಕ್ಕಾಗಿ ಉಪಯೋಗಿಸಿಕೊಂಡಿದ್ದಲ್ಲಿ, ಅಂತಹ ಜಮೀನುಗಳನ್ನು ಸ್ವಾಧೀನಪಡಿಸಿಕೊಂಡ ಕಾರಣದಿಂದಾಗಿ ನಿರಾಶ್ರಿತರಾದ ಕುಟುಂಬದ ಸದಸ್ಯರು / ವ್ಯಕ್ತಿಗಳು ಈ ನಿಯಮಗಳಿಗೆ ಸೌಲಭ್ಯ ಪಡೆಯಲು ಅರ್ಹರಿರುವುದಿಲ್ಲ.

ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ:ಸಿಆಸುಇ:44: ಸೇನೇನಿ ದಿನಾಂಕ:27.07.2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

***15] ಕನ್ನಡ ಮಾಧ್ಯಮದ ಅಭ್ಯರ್ಥಿಗಳು:***

1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳೂ ಈ ಮೀಸಲಾತಿಗೆ ಅರ್ಹರಾಗುತ್ತಾರೆ. [1ನೇ ತರಗತಿಗೆ ದಾಖಲಾಗದೇ ನೇರವಾಗಿ ನಂತರದ ಹೆಚ್ಚಿನ ತರಗತಿಗೆ ದಾಖಲಾಗಿ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ್ದಲ್ಲಿ ಸಹ ಈ ಸೌಲಭ್ಯಕ್ಕೆ ಅರ್ಹರಾಗುವರು] ಈ ಅಭ್ಯರ್ಥಿಗಳು ಸಂಬಂಧಿಸಿದ ಮುಖ್ಯೋಪಾಧ್ಯಾಯರಿಂದ ದೃಢೀಕೃತ ಪ್ರಮಾಣ ಪತ್ರಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳವರ ಮೇಲುಸಹಿಯೊಂದಿಗೆ ಸಲ್ಲಿಸತಕ್ಕದ್ದು. ಪ್ರಮಾಣ ಪತ್ರಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳವರ ಮೇಲು ಸಹಿಯೊಂದಿಗೆ ಸಲ್ಲಿಸತಕ್ಕದ್ದು. ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು.

***16] ಗೌರವ ಶಿಕ್ಷಕರ ಪ್ರಮಾಣ ಪತ್ರ:***

ಸರ್ಕಾರಿ ಶಾಲೆಗಳಲ್ಲಿ ಗೌರವ ಶಿಕ್ಷಕರಾಗಿ ಸಲ್ಲಿಸಿದ ಸೇವಾ ಅವಧಿಗೆ ಕೃಪಾಂಕ ಪಡೆಯಲಿಚ್ಚಿಸುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಸಂಬಂಧಿಸಿದ ಶಾಲೆಯ ಮುಖ್ಯಸ್ಥರಿಂದ ಪ್ರಮಾಣ ಪತ್ರವನ್ನು ಪಡೆದು, ಆಯಾ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಇವರಿಂದ ದೃಢೀಕರಿಸಿಕೊಂಡಿರಬೇಕು. ಸದರಿ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು.

***17] ಅಭ್ಯರ್ಥಿಗಳ ಮಾಹಿತಿ ಸಂಬಂಧ ಆಕ್ಷೇಪಣೆ ಸ್ವೀಕರಿಸಿ ದಾಖಲಿಸುವುದು:***

ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳು, ಅರ್ಹತಾದಾಯಕ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳು ಹಾಗೂ ಅಭ್ಯರ್ಥಿಯು ಅರ್ಜಿಯಲ್ಲಿ ಕ್ಲೇಮು ಮಾಡಿರುವ ಮೀಸಲಾತಿ ವಿವರಗಳನ್ನು ಒಳಗೊಂಡ ಪೂರ್ಣ ಮಾಹಿತಿಯನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ಎಲ್ಲಾ ಅಭ್ಯರ್ಥಿಗಳ ವಿವರಗಳನ್ನು ಅಂದರೆ, ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳು, ಅರ್ಹತಾದಾಯಕ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳು ಹಾಗೂ ಆನ್‌ಲೈನ್ ಅರ್ಜಿಯಲ್ಲಿ ಕ್ಲೇಮು ಮಾಡಿರುವ ಮೀಸಲಾತಿ ವಿವರಗಳನ್ನು ಒಳಗೊಂಡ ಪೂರ್ಣ ಮಾಹಿತಿಯನ್ನು ಇಲಾಖಾ ವೆಬ್‌ಸೈಟ್ http://schooleducation.kar.nic.in ನಲ್ಲಿ ಪ್ರಕಟಿಸಿ, ನಿಗದಿತ ಸಮಯ ನೀಡಿ ಆಕ್ಷೇಪಣೆಗಳನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಗುವುದು. ಅಭ್ಯರ್ಥಿಯು ಆನ್‌ಲೈನ್ ಮೂಲಕ ಸಲ್ಲಿಸಿರುವ ಅರ್ಜಿಯಲ್ಲಿ ದಾಖಲಿಸಿದ ಶೈಕ್ಷಣಿಕ ಮಾಹಿತಿಯಲ್ಲಿ ವ್ಯತ್ಯಾಸವಾಗಿದ್ದಲ್ಲಿ ಮಾತ್ರ ನಿಗದಿತ ನಮೂನೆಯಲ್ಲಿ ಆಕ್ಷೇಪಣೆಗಳನ್ನು ಸಲ್ಲಿಸಬೇಕಾಗುತ್ತದೆ. ಆದರೆ, ಮೂಲ ಅರ್ಜಿಯಲ್ಲಿ ದಾಖಲಿಸದಿರುವ ಯಾವುದೇ ಮಾಹಿತಿಯನ್ನು ಪರಿಗಣಿಸಲಾಗುವುದಿಲ್ಲ. ಆಕ್ಷೇಪಣೆಗಳನ್ನು ನಿಯಮಾನುಸಾರ ಪರಿಶೀಲಿಸಿ, ಅಭ್ಯರ್ಥಿಗಳು ನೀಡಿದ ಶೈಕ್ಷಣಿಕ ದಾಖಲೆಗಳ ಆಧಾರದ ಮೇಲೆ ಪರಿಷ್ಕರಿಸಿ, ಪುನಃ ಇಲಾಖಾ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು.

***18] ಆಯ್ಕೆ ಪಟ್ಟಿ ತಯಾರಿಸುವ ವಿಧಾನ:***

ಆಯ್ಕೆ ಪಟ್ಟಿಯನ್ನು ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇಲೆ ತಯಾರಿಸಲಾಗುತ್ತದೆ. ಅರ್ಹತೆ ಮತ್ತು ಮೀಸಲಾತಿ ಬಗ್ಗೆ ವಿವರಗಳನ್ನು ಈಗಾಗಲೇ ನೀಡಿದೆ. ಆಯ್ಕೆ ಪಟ್ಟಿಯನ್ನು ಎರಡು ಹಂತಗಳಲ್ಲಿ ತಯಾರಿಸಲಾಗುತ್ತದೆ.

- ***ಮೊದಲ ಹಂತ:*** ತಾತ್ಕಾಲಿಕ ಆಯ್ಕೆಪಟ್ಟಿ ಪ್ರಕಟಣೆ ಹಾಗೂ ಆಕ್ಷೇಪಣೆಗಳ ಆಹ್ವಾನ.
- ***ಎರಡನೇ ಹಂತ:*** ಮೂಲ ಪ್ರಮಾಣ ಪತ್ರಗಳ ಪರಿಶೀಲನೆ ಮತ್ತು ಅಂತಿಮ ಆಯ್ಕೆ ಪಟ್ಟಿ ಪ್ರಕಟಣೆ.

***ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಣೆ ಹಾಗೂ ಆಕ್ಷೇಪಣೆಗಳ ಆಹ್ವಾನ:***

ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿ ಅಭ್ಯರ್ಥಿಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗುತ್ತದೆ. ಆಕ್ಷೇಪಣೆಗಳನ್ನು ಸಲ್ಲಿಸಲು ಅಂತಿಮ ದಿನಾಂಕವನ್ನು ನಿಗದಿಪಡಿಸಲಾಗುತ್ತದೆ. ಈ ಬಗ್ಗೆ ಸೂಚನೆಯನ್ನು ದಿನಪತ್ರಿಕೆಗಳಲ್ಲಿ ನೀಡಲಾಗುತ್ತದೆ. ಅಭ್ಯರ್ಥಿಗಳು ತಮ್ಮ ಆಕ್ಷೇಪಣೆಗಳನ್ನು ನಿಗಧಿತ ದಿನಾಂಕದೊಳಗೆ ತಪ್ಪದೇ ಸಲ್ಲಿಸಬೇಕು. ನಂತರ ನೀಡಿದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ ಹಾಗೂ ಈ ಬಗ್ಗೆ ಯಾವುದೇ ಸೂಚನೆ ನೀಡುವುದಿಲ್ಲ. ಇದೇ ರೀತಿ ಯಾವುದೇ ಅಭ್ಯರ್ಥಿ ಆಕ್ಷೇಪಣೆಗಳನ್ನು ಸಲ್ಲಿಸದಿದ್ದಲ್ಲಿ ಅಂತಿಮ ಆಯ್ಕೆ ಪಟ್ಟಿಯಲ್ಲಿ ಯಾವುದೇ ರೀತಿಯ ಪರಿಹಾರಕ್ಕೆ ಅರ್ಹತೆ ಪಡೆಯುವುದಿಲ್ಲ. ಹಾಗೂ ಅಂತಿಮ ಆಯ್ಕೆಪಟ್ಟಿಯ ಪ್ರಕಟಣೆಯ ನಂತರ ಮತ್ತೆ ಅವರ ಅರ್ಹತೆಯ ಪರಿಶೀಲನೆಗಾಗಲೀ ಅಥವಾ ಇನ್ನಾವುದೇ ಬಗೆಯ ಪರಿಹಾರಕ್ಕಾಗಲೀ ಅರ್ಹತೆ ಪಡೆಯುವುದಿಲ್ಲ.

***19] ಅಂತಿಮ ಆಯ್ಕೆ ಪಟ್ಟಿ ಪ್ರಕಟಣೆ:***

- ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿದಾಗ ಪ್ರತಿ ಅಭ್ಯರ್ಥಿ ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಲ್ಲಿಸಬೇಕೆಂದು ಪ್ರಕಟಣೆಯಲ್ಲಿ ತಿಳಿಸಲಾಗಿರುತ್ತದೆ. ಇದರಂತೆ ಅಭ್ಯರ್ಥಿಗಳು ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಅರ್ಜಿ ಸ್ವೀಕೃತಿ ಮತ್ತು ಗುರುತಿನ ಪತ್ರದ ಪ್ರತಿ ಸಹಿತ ಪರಿಶೀಲನೆಗೆ ಸಲ್ಲಿಸಬೇಕು. ***ಅಭ್ಯರ್ಥಿಗಳಿಗೆ ಈ ಬಗ್ಗೆ ವೈಯಕ್ತಿಕವಾಗಿ ಸೂಚನೆ ನೀಡಲಾಗುವುದಿಲ್ಲ.*** ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಸಲ್ಲಿಸದಿರುವ / ಕೌನ್ಸಿಲಿಂಗ್‌ಗೆ ಗೈರು ಹಾಜರಾಗುವ / ಅಪೂರ್ಣ ದಾಖಲೆಗಳನ್ನು ಸಲ್ಲಿಸುವ ಅಭ್ಯರ್ಥಿಗಳು ಅಂತಿಮ ಆಯ್ಕೆಪಟ್ಟಿಯಲ್ಲಿ ಅವಕಾಶವನ್ನು ಕಳೆದುಕೊಳ್ಳುತ್ತಾರೆ.
- ಜಿಲ್ಲಾ ಮಟ್ಟದ ಅಂತಿಮ ಆಯ್ಕೆಪಟ್ಟಿಯಿಂದ ಬ್ಲಾಕ್ ಮಟ್ಟದ ಆಯ್ಕೆಪಟ್ಟಿಯನ್ನು ಅಭ್ಯರ್ಥಿಗಳು ಅರ್ಜಿಯಲ್ಲಿ ಸೂಚಿಸಿರುವ ಬ್ಲಾಕ್‌ಗಳ ಆದ್ಯತೆಯ ಆಧಾರದ ಮೇಲೆ ತಯಾರಿಸಲಾಗುತ್ತದೆ. ಅಭ್ಯರ್ಥಿಗಳು ಅರ್ಜಿಯಲ್ಲಿ ಬ್ಲಾಕ್‌ಗಳ ಆದ್ಯತೆಯನ್ನು ಸರಿಯಾಗಿ ನಮೂದಿಸಬೇಕು.
- ಬ್ಲಾಕ್ ಮಟ್ಟದ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಪ್ರಾಧಿಕಾರಿಗಳಾದ ಕ್ಷೇತ್ರ ಶಿಕ್ಷಣಾಧಿಕಾರಿಗಳು ಕೌನ್ಸಿಲಿಂಗ್ ಮೂಲಕ ನೇಮಕಾತಿ ಆದೇಶ ನೀಡುತ್ತಾರೆ.

***20] ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ವಿವರಗಳು:***

***ಅ. ಪರೀಕ್ಷೆಯ ಹೆಸರು:*** ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿಯರ ಹುದ್ದೆಗಳ ನೇಮಕಾತಿಗೆ ನಡೆಸುವ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಪ್ರತಿಯೊಂದಿಗೆ ಅಭ್ಯರ್ಥಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾಗುವುದು ಕಡ್ಡಾಯವಾಗಿರುತ್ತದೆ.

***ಆ. ಪರೀಕ್ಷೆ ನಡೆಸುವ ಪ್ರಾಧಿಕಾರ:*** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯನ್ನು ಆಯ್ಕೆ ಪ್ರಾಧಿಕಾರ ಹಾಗೂ ಉಪನಿರ್ದೇಶಕರು [ಆಡಳಿತ], ಸಾರ್ವಜನಿಕ ಶಿಕ್ಷಣ ಇಲಾಖೆ, ಇವರು ತಮ್ಮ ಶೈಕ್ಷಣಿಕ ಜಿಲ್ಲೆಯ ವ್ಯಾಪ್ತಿಯಲ್ಲಿ ನಡೆಸುವರು.

ಇ. ಪರೀಕ್ಷೆ ನಡೆಸುವ ದಿನಾಂಕ:24.03.2013.

***ಈ. ಪರೀಕ್ಷಾ ಅವದಿ ಹಾಗೂ ಸಮಯ:*** ಬೆಳಿಗ್ಗೆ 10.30 ರಿಂದ ಮಧ್ಯಾಹ್ನ 12.00ಗಂಟೆ.

***ಉ. ಪ್ರಶ್ನೆ ಪತ್ರಿಕೆಯಲ್ಲಿನ ವಿಷಯ ಹಾಗೂ ಅಂಕಗಳು:*** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಕೆಳಕಂಡ ಐದು ವಿಷಯಗಳನ್ನೊಳಗೊಂಡ ಒಂದು ಪ್ರಶ್ನೆ ಪತ್ರಿಕೆಯನ್ನು ಹೊಂದಿರುವುದು. ಪ್ರತಿ ವಿಷಯದಲ್ಲಿ ಒಂದು ಅಂಕದ 30 ಪ್ರಶ್ನೆಗಳಿದ್ದು, ಐದು ವಿಷಯಗಳಿಗೆ ಒಟ್ಟು 150 ಅಂಕಗಳನ್ನು ನಿಗದಿಪಡಿಸಲಾಗಿದೆ. ಪ್ರಸ್ತುತ ನಡೆಯುತ್ತಿರುವ ಪರೀಕ್ಷೆ ಎನ್.ಸಿ.ಟಿ.ಇ., ನಿಗದಿ ಪಡಿಸಿರುವ ಶಿಕ್ಷಕರ ಅರ್ಹತಾ ಪರೀಕ್ಷೆ ಸ್ವರೂಪವನ್ನು ಅನುಸರಿಸಿ ನಡೆಸಲಾಗುವುದು.

***ವಿಷಯ ಮತ್ತು ನಿಗದಿಪಡಿಸಿರುವ ಗರಿಷ್ಠ ಅಂಕಗಳ ವಿಂಗಡಣೆ ಕೆಳಗಿನಂತಿದೆ.***

| ಕ್ರ.ಸಂ | ವಿಷಯ | ಅಂಕಗಳು |
|---|---|---|
| 01. | ಶಿಶು ಮನೋವಿಜ್ಞಾನ ಮತ್ತು ವಿಕಸನ. | 30 |
| 02. | ಬಾಷೆ: ಕನ್ನಡ / ಉರ್ದು/ಮರಾಠಿ / ತಮಿಳು / ತೆಲುಗು / ಮಲಯಾಳಂ | 30 |
| 03. | ಆಂಗ್ಲ ಭಾಷೆ | 30 |
| 04. | ಪರಿಸರ ಅಧ್ಯಯನ [ವಿಜ್ಞಾನ ಮತ್ತು ಸಮಾಜ ವಿಜ್ಞಾನ] | 30 |
| 05. | ಗಣಿತ | 30 |
| | ಒಟ್ಟು | **150** |

***21] ಪರೀಕ್ಷಾ ವಿಷಯಗಳಿಗೆ ನಿಗದಿಪಡಿಸಿರುವ ಪಠ್ಯವಸ್ತು: [ಎನ್.ಸಿ.ಟಿ.ಇ., ನಿಗಧಿಪಡಿಸಿರುವ ಪರೀಕ್ಷಾ ಪಠ್ಯ ಕ್ರಮದಂತೆ]***

*01.* ಭಾಷೆ : ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು, ಮಲಯಾಳಂ.

*02.* ಆಂಗ್ಲ ಭಾಷೆ, [4] ಪರಿಸರ ಅಧ್ಯಯನ [ವಿಜ್ಞಾನ ಮತ್ತು ಸಮಾಜ ವಿಜ್ಞಾನ] [5] ಗಣಿತ.

*03.* ಪ್ರಶ್ನೆಗಳ ವ್ಯಾಪ್ತಿ ಹಾಗೂ ಸ್ವರೂಪ.

*ಅ.* ಪ್ರಶ್ನೆಗಳು ನಿಗದಿಪಡಿಸಲಾಗಿರುವ ಪಠ್ಯವಸ್ತುವಿನ ವ್ಯಾಪ್ತಿಯಲ್ಲಿ ಬರುತ್ತದೆ.

*ಆ.* ಪ್ರಶ್ನಗಳು ವಸ್ತುನಿಷ್ಠವಾಗಿದ್ದು ಪ್ರತಿ ಪ್ರಶ್ನೆಗೆ ಒಂದು ಅಂಕ ನಿಗದಿಪಡಿಸಿದೆ.

*ಇ.* ಪ್ರತಿ ಪ್ರಶ್ನೆ ನಾಲ್ಕು ಉತ್ತರಗಳನ್ನು ಹೊಂದಿದ್ದು, ಇವುಗಳಲ್ಲಿ ಒಂದು ಸರಿ ಉತ್ತರವಾಗಿರುತ್ತದೆ.

*ಈ.* ಉತ್ತರಗಳನ್ನು 'ಓ.ಎಂ.ಆರ್' ಶೀಟಿನಲ್ಲಿ ಗುರುತಿಸುವುದು.

*ಉ.* ಪ್ರಶ್ನೆ ಪತ್ರಿಕೆಗಳು ಪ್ರತಿ ಮಾಧ್ಯಮದ ಹುದ್ದೆಗಳಿಗೆ ಆಯಾ ಮಾಧ್ಯಮದ ಭಾಷೆಗಳಲ್ಲಿ ಇರುತ್ತದೆ.

***22] ಪ್ರಮುಖವಾದ ಸೂಚನೆಗಳು:***

*01.* ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿಗಳನ್ನು ಸಲ್ಲಿಸಬೇಕು. ನಿಗದಿತ ನಮೂನೆಯಲ್ಲಿ ಸಲ್ಲಿಸದ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಮತ್ತು ಆಯ್ಕೆಗೆ ಪರಿಗಣಿಸುವುದಿಲ್ಲ. ಅಭ್ಯರ್ಥಿಗಳು ಪ್ರವೇಶ ಪತ್ರವನ್ನು ಆನ್‌ಲೈನ್ ಮೂಲಕವೇ ಪಡೆಯತಕ್ಕದ್ದು. ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಹಾಜರಾದ ಮಾತ್ರಕ್ಕೆ ಅಭ್ಯರ್ಥಿ ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಭ್ಯರ್ಥಿಯು ಇದರ ಜೊತೆಗೆ ಆಯಾ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿ ಹೊಂದಿರತಕ್ಕದ್ದು.

*02.* ಅರ್ಜಿಗಳನ್ನು ದಿನಾಂಕ:02.03.2013ರ ಸಂಜೆ 5.30ರೊಳಗೆ ಆನ್‌ಲೈನ್ ಮೂಲಕವೇ ಸಲ್ಲಿಸಬೇಕು. ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ. ಅಂಚೆ ಮೂಲಕ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

*03.* ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಸಮಯಕ್ಕೆ ***ಎಲ್ಲಾ ಪ್ರಮಾಣ ಪತ್ರಗಳನ್ನು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕದ ಮೊದಲೇ ಪಡೆದಿರಬೇಕು.*** ಆದರೆ, ತಾತ್ಕಾಲಿಕ ಆಯ್ಕೆಪಟ್ಟಿಯ ಪ್ರಕಟಣೆಯ ನಂತರ ಆಯ್ಕೆ ಹೊಂದಿದ್ದಲ್ಲಿ ಅಥವಾ ಆಕ್ಷೇಪಣೆ ನೀಡುವ ಹಂತದಲ್ಲಿ ಎಲ್ಲಾ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಆಯ್ಕೆ ಪ್ರಾಧಿಕಾರಕ್ಕೆ ಸಲ್ಲಿಸಬೇಕು.

*04.* ಅಭ್ಯರ್ಥಿಗಳು ಪಾಸ್‌ಪೋರ್ಟ್ ಅಳತೆಯ ಇತ್ತೀಚಿನ ಭಾವಚಿತ್ರವನ್ನು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವ ಸಮಯದಲ್ಲಿ ಅರ್ಜಿ ನಮೂನೆಯಲ್ಲಿ ನಿಗದಿಪಡಿಸಿರುವ ಸ್ಥಳದಲ್ಲಿಯೇ ಸ್ಕ್ಯಾನ್ ಮಾಡಿ ಸಲ್ಲಿಸುವುದು.

*05.* ಪ್ರಮಾಣ ಪತ್ರಗಳು ಪರಿಶೀಲನೆಯ ಸಮಯದಲ್ಲಿ ***ಸುಳ್ಳು ದಾಖಲೆ ಅಥವಾ ಸುಳ್ಳು ಮಾಹಿತಿ ನೀಡಿರುವುದು ಕಂಡುಬಂದಲ್ಲಿ ಅಂತಹ ಅಭ್ಯರ್ಥಿಗಳು ಆಯ್ಕೆಯಾಗುವ ಅವಕಾಶವನ್ನು ಕಳೆದುಕೊಳ್ಳುತ್ತಾರೆ.***

*06.* ಆಯ್ಕೆಪಟ್ಟಿಯಲ್ಲಿ ಸೇರ್ಪಡೆಯಾದ ಮಾತ್ರಕ್ಕೆ ಅಭ್ಯರ್ಥಿಗಳ ನೇಮಕಾತಿಗೆ ಹಕ್ಕನ್ನು ಪಡೆದುಕೊಳ್ಳುವುದಿಲ್ಲ.

*07.* ಮೇಲಿನ ನೇಮಕಾತಿಗಳು ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಆದೇಶಗಳು ಮತ್ತು ತಿದ್ದುಪಡಿಗೆ ಒಳಪಟ್ಟಿರುತ್ತದೆ.

*08.* ಯಾವುದೇ ಹಂತದಲ್ಲಿ ತಪ್ಪು ಮಾಹಿತಿಯ ಆಧಾರದ ಮೇಲೆ ಆಯ್ಕೆಯಾದ ಅಥವಾ ಅನರ್ಹತೆಯ ಕಾರಣಗಳಿಗಾಗಿ ಅಭ್ಯರ್ಥಿಯ ಹೆಸರನ್ನು ಪಟ್ಟಿಯಿಂದ ಕೈಬಿಡುವ ಅಥವಾ ನೇಮಕಾತಿ ಆದೇಶವನ್ನು ರದ್ದುಗೊಳಿಸುವ ಅಧಿಕಾರವನ್ನು ಇಲಾಖೆಯು ಕಾಯ್ದಿರಿಸಿಕೊಂಡಿರುತ್ತದೆ.

*09.* ಆಯ್ಕೆಯಾದ ಅಭ್ಯರ್ಥಿಯು ತಾನು ನೇಮಕಗೊಂಡ ಜೇಷ್ಠತಾ ಘಟಕ [ತಾಲ್ಲೂಕು]ದಲ್ಲಿ ಮಾತ್ರ ಸೇವೆ ಸಲ್ಲಿಸಬೇಕಾಗಿರುತ್ತದೆ.

*10.* ಅಭ್ಯರ್ಥಿಗಳು ಅವರ ಅರ್ಜಿಗಳಲ್ಲಿ ಭರ್ತಿ ಮಾಡಿರುವ ಮಾಹಿತಿಗಳ ಆಧಾರದ ಮೇಲೆ ಅವರಿಗೆ ಸ್ಪರ್ಧಾತ್ಮಕ ಪರೀಕ್ಷೆ ಬರೆಯಲು ಪ್ರವೇಶ ಪತ್ರಗಳನ್ನು ನೀಡುತ್ತದೆ. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಅಂಕಗಳ ಮಾಹಿತಿ, ಮೀಸಲಾತಿ, ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಪೂರ್ಣ ಮಾಹಿತಿ ನೀಡದ ಅಥವಾ ತಪ್ಪು ಮಾಹಿತಿ ನೀಡಿದ ಸಂದರ್ಭಗಳಲ್ಲಿ ಮುಂದಿನ ಆಗುಹೋಗುಗಳಿಗೆ ಅಭ್ಯರ್ಥಿಗಳೇ ಜವಾಬ್ದಾರರು.

*11.* ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಹಾಗೂ ವಯೋಮಿತಿ ಸಡಿಲಿಕೆ ಇತ್ಯಾದಿಗಳಿಗೆ ಸಂಬಂಧಿತ ವಿವರಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು. ಈ ಬಗ್ಗೆ ಅನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಮನವಿ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.

*12.* ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

*13.* ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವಾಗ ಪ್ರವೇಶ ಪತ್ರ, ಸ್ವೀಕೃತಿ ಪತ್ರ ಹಾಗೂ ಇತರೆ ದಾಖಲೆಗಳನ್ನು ಆಯ್ಕೆ ಪ್ರಕ್ರಿಯೆ ಮುಗಿಯುವ ತನಕ ಸುರಕ್ಷಿತವಾಗಿ ಇಟ್ಟುಕೊಳ್ಳತಕ್ಕದ್ದು. ಈ ಅರ್ಜಿಯನ್ನು ಭರ್ತಿ ಮಾಡುವ ವಿಧಾನ, ಮೀಸಲಾತಿ ಪ್ರಮಾಣ ಪತ್ರಗಳ ನಮೂನೆ, ಮೀಸಲಾತಿಯ [Horizontal and vertical Reservations] ವಿವರ ಹಾಗೂ ಸರ್ಕಾರಿ ಆದೇಶಗಳ ಬಗ್ಗೆ ಮಾಹಿತಿ ನೀಡಲಾಗಿದ್ದು, ಅಭ್ಯರ್ಥಿಗಳು ಅವುಗಳನ್ನು ಗಮನವಿಟ್ಟು ಓದಿಕೊಳ್ಳತಕ್ಕದ್ದು.

*14.* ದುರ್ನಡತೆ: ಒಬ್ಬ ಅಭ್ಯರ್ಥಿಯು ನಕಲು ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂಬ ಬಗ್ಗೆ ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ಆಯ್ಕೆ ಪ್ರಾಧಿಕಾರದಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದೇ ಅಲ್ಲದೇ, ಆಯ್ಕೆ ಪ್ರಾಧಿಕಾರವು ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

*15.* ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿದ ನಂತರ ಅಭ್ಯರ್ಥಿಗಳು ಆಕ್ಷೇಪಣೆ ಸಲ್ಲಿಸುವಾಗ ಮೂಲ ಅರ್ಜಿಯಲ್ಲಿ ದಾಖಲಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ಸಲ್ಲಿಸಬಹುದು. [ಅರ್ಜಿಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ] ನಮೂದಿಸಲು ಬಿಟ್ಟುಹೋಗಿದ್ದ ಯಾವುದೇ ಮಾಹಿತಿಯನ್ನು ಹೊಸದಾಗಿ ದಾಖಲಿಸಲು ಬಯಸುವ ಮಾಹಿತಿಗಳನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ಆಕ್ಷೇಪಣೆ ಮತ್ತು ಲಗತ್ತುಗಳನ್ನು ಪರಿಗಣಿಸದೇ ತಿರಸ್ಕರಿಸಲಾಗುವುದು.

*16.* ಅರ್ಜಿ ನಮೂನೆ, ಉತ್ತರ ಪತ್ರಿಕೆ, ಪ್ರವೇಶ ಪತ್ರಗಳ ನಿಗದಿತ ಸ್ಥಳಗಳಲ್ಲಿ ಎಡಗೈ ಹೆಬ್ಬೆಟ್ಟು ಗುರುತನ್ನು ಸ್ಪಷ್ಟವಾಗಿ ಹಾಕಬೇಕು. ಎಡಗೈ ಹೆಬ್ಬೆರಳ ಗುರುತು ರಹಿತ ಅರ್ಜಿಯನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸಲಾಗುವುದು.

*17.* ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ನಂತರ ಪ್ರವೇಶ ಪತ್ರದ ಪ್ರತಿಯನ್ನು ದ್ವಿಪ್ರತಿಯಲ್ಲಿ ಡೌನ್‌ಲೋಡ್ ಮಾಡಿಕೊಂಡು ಆ ಪ್ರತಿಗಳಲ್ಲಿ ಒಂದೇ ಮಾದರಿಯ ಇತ್ತೀಚಿನ ತಲಾ ಒಂದು ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು.

*18.* ನೇಮಕಾತಿ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೆ ಈ ಸಂಬಂಧ ಆಯ್ಕೆ ಪ್ರಾಧಿಕಾರಿ / ನೇಮಕಾತಿ ಪ್ರಾಧಿಕಾರಿಗಳು ನೀಡುವ ಸೂಚನೆಗಳನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್ [http://schooleducation.kar.nic.in] ನಲ್ಲಿ ಅವಲೋಕಿಸುವುದು.

*19.* ಈ ಪರೀಕ್ಷೆಯನ್ನು ಶಿಕ್ಷಕರ ಅರ್ಹತಾ ಪರೀಕ್ಷೆಯೆಂದು ಪರಿಗಣಿಸಲಾಗುವುದು. ನಿಗದಿತ ಅರ್ಹತೆ ಪಡೆದಿರುವವರಿಗೆ ಕ್ರಮ ಸಂಖ್ಯೆ 2 ರಲ್ಲಿ ತಿಳಿಸಿರುವಂತೆ ಅರ್ಹತಾ ಪ್ರಮಾಣ ಪತ್ರ ನೀಡಲಾಗುವುದು. ಮುಂದಿನ ನೇಮಕಾತಿಗಳಿಗೂ ಸಹ ಈ ಪ್ರಮಾಣ ಪತ್ರವನ್ನು ಉಪಯೋಗಿಸಬಹುದಾಗಿದೆ.

ಹೆಚ್ಚಿನ ವಿವರಗಳಿಗೆ ಆನ್‌ಲೈನ್‌ನಲ್ಲಿ ನೀಡಿರುವ ಸೂಚನೆಗಳನ್ನು ಗಮನಿಸಬೇಕು. ಹಾಗೂ ಯಾವುದೇ ಹೆಚ್ಚಿನ ಸ್ಪಷ್ಟೀಕರಣಕ್ಕೆ ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಇವರ ಕಛೇರಿಯನ್ನು ಸಂಪರ್ಕಿಸಬಹುದು.

ಆಯ್ಕೆ ಪ್ರಾಧಿಕಾರಿ ಹಾಗೂ ಜಿಲ್ಲಾ ಉಪನಿರ್ದೇಶಕರು,
ಸಾರ್ವಜನಿಕ ಶಿಕ್ಷಣ ಇಲಾಖೆ, ಹಾವೇರಿ ಜಿಲ್ಲೆ.

***ಉಪ ನಿರ್ದೇಶಕರ ಕಛೇರಿ ಸಾರ್ವಜನಿಕ ಶಿಕ್ಷಣ ಇಲಾಖೆ ಹಾವೇರಿ***

***ವಿಷಯ : ಕನ್ನಡ ಸಾಮಾನ್ಯ***

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | | | | | | ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | | ಅಂಗವಿಕಲರು | | | | | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ–1 | ಪ್ರವರ್ಗ– 2(ಎ) | ಪ್ರವರ್ಗ– 2(ಬಿ) | ಪ್ರವರ್ಗ– 3(ಎ) | ಪ್ರವರ್ಗ– 3(ಬಿ) | ಸಾಮಾನ್ಯ ಅರ್ಹತೆ | ಒಟ್ಟು |
| ಹಾನಗಲ್ಲ | ಪ ಜಾತಿ | | ಪ ಜಾತಿ | | 2–ಎ | | | 14 | ಇತರರು | 1 | | | 1 | | | | 3 | 5 |
| | ಪ ಪಂ | | ಪ ಪಂ | | 2–ಬಿ | | | | ಗ್ರಾಮೀಣ | 1 | | | 1 | | | | 2 | 4 |
| | | | ಸಾ ಅ | | 3–ಎ | | | | ಮಾಜಿ ಸೈನಿಕ | | | 1 | | | | | | 1 |
| | | | ಪ್ರ–1 | | 3–ಬಿ | | | | ಕ ಮಾ ಅ | 1 | | | 1 | | | | 1 | 3 |
| | | | | | | | | | ಯೋ ನಿ ಅ | | | | | | | | 1 | 1 |
| | | | | | | | | | ಅಂ ವಿ | | | | | | | | | 0 |
| | | | | | | | | **14** | ಒಟ್ಟು | 3 | 0 | 1 | 3 | 0 | 0 | 0 | 7 | 14 |

***ವಿಷಯ:– ಕನ್ನಡ ಸಾಮಾನ್ಯ***

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | | | | | | ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | ಅಂಗವಿಕಲರು | | | | | | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ–1 | ಪ್ರವರ್ಗ–2(ಎ) | ಪ್ರವರ್ಗ–2(ಬಿ) | ಪ್ರವರ್ಗ–3(ಎ) | ಪ್ರವರ್ಗ–3(ಬಿ) | ಸಾಮಾನ್ಯ ಅರ್ಹತೆ | ಒಟ್ಟು |
| | ಪ ಜಾತಿ | | ಪ ಜಾತಿ | | 2–ಎ | | | 6 | ಇತರರು | | | | | | | | 2 | 2 |
| | ಪ ಪಂ | | ಪ ಪಂ | | 2–ಬಿ | | | | ಗ್ರಾಮೀಣ | 1 | | | | | | | | 1 |
| | | | ಸಾ ಅ | | 3–ಎ | | | | ಮಾಜಿ ಸೈನಿಕ | | | | | | | | 1 | 1 |
| ಹಾವೇರಿ | | | ಪ್ರ–1 | | 3–ಬಿ | | | | ಕ ಮಾ ಅ | | | | | | | | | 0 |
| | | | | | | | | | ಯೋ ನಿ ಅ | | | | | | | | | 0 |
| | | | | | | | | | ಅಂ ವಿ | | 1 | | | | | 1 | | 2 |
| | | | | | | | | **6** | ಒಟ್ಟು | 1 | 1 | 0 | 0 | 0 | 0 | 1 | 3 | 6 |

***ವಿಷಯ:– ವಿಜ್ಞಾನ***

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | | | | | | ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | ಅಂಗವಿಕಲರು | | | | | | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ–1 | ಪ್ರವರ್ಗ–2(ಎ) | ಪ್ರವರ್ಗ–2(ಬಿ) | ಪ್ರವರ್ಗ–3(ಎ) | ಪ್ರವರ್ಗ–3(ಬಿ) | ಸಾಮಾನ್ಯ ಅರ್ಹತೆ | ಒಟ್ಟು |
| | ಪ ಜಾತಿ | | ಪ ಜಾತಿ | | 2–ಎ | | | 3 | ಇತರರು | | | | | | | | 1 | 1 |
| | ಪ ಪಂ | | ಪ ಪಂ | | 2–ಬಿ | | | | ಗ್ರಾಮೀಣ | | | | | | | | | 0 |
| | | | ಸಾ ಅ | | 3–ಎ | | | | ಮಾಜಿ ಸೈನಿಕ | | | | | | | | | 0 |
| ಹಾನಗಲ್ಲ | | | ಪ್ರ–1 | | 3–ಬಿ | | | | ಕ ಮಾ ಅ | | | | | | | | | 0 |
| | | | | | | | | | ಯೋ ನಿ ಅ | | | | | | | | | 0 |
| | | | | | | | | | ಅಂ ವಿ | | 1 | | | | | | 1 | 2 |
| | | | | | | | | **3** | ಒಟ್ಟು | 0 | 1 | 0 | 0 | 0 | 0 | 0 | 2 | 3 |

***ವಿಷಯ:– ವಿಜ್ಞಾನ***

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | | | | | | ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | ಅಂಗವಿಕಲರು | | | | | | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ–1 | ಪ್ರವರ್ಗ–2(ಎ) | ಪ್ರವರ್ಗ–2(ಬಿ) | ಪ್ರವರ್ಗ–3(ಎ) | ಪ್ರವರ್ಗ–3(ಬಿ) | ಸಾಮಾನ್ಯ ಅರ್ಹತೆ | ಒಟ್ಟು |
| | ಪ ಜಾತಿ | | ಪ ಜಾತಿ | | 2–ಎ | | | 1 | ಇತರರು | 0 | | | 1 | | | | | 1 |
| | ಪ ಪಂ | | ಪ ಪಂ | | 2–ಬಿ | | | | ಗ್ರಾಮೀಣ | | | | | | | | | 0 |
| | | | ಸಾ ಅ | | 3–ಎ | | | | ಮಾಜಿ ಸೈನಿಕ | | | | | | | | | 0 |
| ಶಿಗ್ಗಾಂವ | | | ಪ್ರ–1 | | 3–ಬಿ | | | | ಕ ಮಾ ಅ | | | | | | | | | 0 |
| | | | | | | | | | ಯೋ ನಿ ಅ | | | | | | | | | 0 |
| | | | | | | | | | ಅಂ ವಿ | | | | | | | | | 0 |
| | | | | | | | | **1** | ಒಟ್ಟು | 0 | 0 | 0 | 1 | 0 | 0 | 0 | 0 | 1 |

*ವಿಷಯ:– ಇಂಗ್ಲೀಷ (ಕನ್ನಡ ಮಾಧ್ಯಮ)*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | | | | | | ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | ಅಂಗವಿಕಲರು | | | | | | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ–1 | ಪ್ರವರ್ಗ–2(ಎ) | ಪ್ರವರ್ಗ–2(ಬಿ) | ಪ್ರವರ್ಗ–3(ಎ) | ಪ್ರವರ್ಗ–3(ಬಿ) | ಸಾಮಾನ್ಯ ಅರ್ಹತೆ | ಒಟ್ಟು |
| ಹಾನಗಲ್ಲ | ಪ ಜಾತಿ | | ಪ ಜಾತಿ | | 2–ಎ | | | 4 | ಇತರರು | 0 | | | | | | 1 | 2 | 3 |
| | ಪ ಪಂ | | ಪ ಪಂ | | 2–ಬಿ | | | | ಗ್ರಾಮೀಣ | | | | | | | | | 0 |
| | | | ಸಾ ಅ | | 3–ಎ | | | | ಮಾಜಿ ಸೈನಿಕ | | | | 1 | | | | | 1 |
| | | | ಪ್ರ–1 | | 3–ಬಿ | | | | ಕ ಮಾ ಅ | | | | | | | | | 0 |
| | | | | | | | | | ಯೋ ನಿ ಅ | | | | | | | | | 0 |
| | | | | | | | | | ಅಂ ವಿ | | | | | | | | | 0 |
| | | | | | | | | **4** | ಒಟ್ಟು | 0 | 0 | 0 | 1 | 0 | 0 | 1 | 2 | 4 |

*ವಿಷಯ:– ಇಂಗ್ಲೀಷ (ಕನ್ನಡ ಮಾಧ್ಯಮ)*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | | | | | | ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | ಅಂಗವಿಕಲರು | | | | | | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ–1 | ಪ್ರವರ್ಗ–2(ಎ) | ಪ್ರವರ್ಗ–2(ಬಿ) | ಪ್ರವರ್ಗ–3(ಎ) | ಪ್ರವರ್ಗ–3(ಬಿ) | ಸಾಮಾನ್ಯ ಅರ್ಹತೆ | ಒಟ್ಟು |
| ಶಿಗ್ಗಾಂವ | ಪ ಜಾತಿ | | ಪ ಜಾತಿ | | 2–ಎ | | | 2 | ಇತರರು | | | | | | | 1 | 1 | 2 |
| | ಪ ಪಂ | | ಪ ಪಂ | | 2–ಬಿ | | | | ಗ್ರಾಮೀಣ | | | | | | | | | 0 |
| | | | ಸಾ ಅ | | 3–ಎ | | | | ಮಾಜಿ ಸೈನಿಕ | | | | | | | | | 0 |
| | | | ಪ್ರ–1 | | 3–ಬಿ | | | | ಕ ಮಾ ಅ | | | | | | | | | 0 |
| | | | | | | | | | ಯೋ ನಿ ಅ | | | | | | | | | 0 |
| | | | | | | | | | ಅಂ ವಿ | | | | | | | | | 0 |
| | | | | | | | | **2** | ಒಟ್ಟು | 0 | 0 | 0 | 0 | 0 | 0 | 1 | 1 | 2 |

*ವಿಷಯ:– ಹಿಂದಿ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | | | | | | ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | ಅಂಗವಿಕಲರು | | | | | | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ–1 | ಪ್ರವರ್ಗ–2(ಎ) | ಪ್ರವರ್ಗ–2(ಬಿ) | ಪ್ರವರ್ಗ–3(ಎ) | ಪ್ರವರ್ಗ–3(ಬಿ) | ಸಾಮಾನ್ಯ ಅರ್ಹತೆ | ಒಟ್ಟು |
| ಹಾನಗಲ್ಲ | ಪ ಜಾತಿ | | ಪ ಜಾತಿ | | 2–ಎ | | | 6 | ಇತರರು | 1 | | | 1 | | 1 | | 1 | 4 |
| | ಪ ಪಂ | | ಪ ಪಂ | | 2–ಬಿ | | | | ಗ್ರಾಮೀಣ | | | | | | | | 1 | 1 |
| | | | ಸಾ ಅ | | 3–ಎ | | | | ಮಾಜಿ ಸೈನಿಕ | | | | | | | | | 0 |
| | | | ಪ್ರ–1 | | 3–ಬಿ | | | | ಕ ಮಾ ಅ | | | | | | | | | 0 |
| | | | | | | | | | ಯೋ ನಿ ಅ | | | | | | | | 1 | 1 |
| | | | | | | | | | ಅಂ ವಿ | | | | | | | | | 0 |
| | | | | | | | | **6** | ಒಟ್ಟು | 1 | 0 | 0 | 1 | 0 | 1 | 0 | 3 | 6 |

*ವಿಷಯ:– ಹಿಂದಿ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | | | | | | ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | | ಅಂಗವಿಕಲರು | | | | | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ–1 | ಪ್ರವರ್ಗ–2(ಎ) | ಪ್ರವರ್ಗ–2(ಬಿ) | ಪ್ರವರ್ಗ–3(ಎ) | ಪ್ರವರ್ಗ–3(ಬಿ) | ಸಾಮಾನ್ಯ ಅರ್ಹತೆ | ಒಟ್ಟು |
| ಶಿಗ್ಗಾಂವ | ಪ ಜಾತಿ | | ಪ ಜಾತಿ | | 2–ಎ | | | 2 | ಇತರರು | | | | 1 | | | | | 1 |
| | ಪ ಪಂ | | ಪ ಪಂ | | 2–ಬಿ | | | | ಗ್ರಾಮೀಣ | | | | | | | | | 0 |
| | | | ಸಾ ಅ | | 3–ಎ | | | | ಮಾಜಿ ಸೈನಿಕ | | | | | | | | | 0 |
| | | | ಪ್ರ–1 | | 3–ಬಿ | | | | ಕ ಮಾ ಅ | | | | | | | | 1 | 1 |
| | | | | | | | | | ಯೋ ನಿ ಅ | | | | | | | | | 0 |
| | | | | | | | | | ಅಂ ವಿ | | | | | | | | | 0 |
| | | | | | | | | **2** | ಒಟ್ಟು | 0 | 0 | 0 | 1 | 0 | 0 | 0 | 1 | 2 |

*ವಿಷಯ:– ಉರ್ದು ಸಾಮಾನ್ಯ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | | | | | | ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | | ಅಂಗವಿಕಲರು | | | | | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ–1 | ಪ್ರವರ್ಗ–2(ಎ) | ಪ್ರವರ್ಗ–2(ಬಿ) | ಪ್ರವರ್ಗ–3(ಎ) | ಪ್ರವರ್ಗ–3(ಬಿ) | ಸಾಮಾನ್ಯ ಅರ್ಹತೆ | ಒಟ್ಟು |
| ಹಾನಗಲ್ಲ | ಪ ಜಾತಿ | | ಪ ಜಾತಿ | | 2–ಎ | | | 10 | ಇತರರು | 1 | | | 1 | | | | 1 | 3 |
| | ಪ ಪಂ | | ಪ ಪಂ | | 2–ಬಿ | | | | ಗ್ರಾಮೀಣ | | 1 | | | | 1 | 1 | 2 | 5 |
| | | | ಸಾ ಅ | | 3–ಎ | | | | ಮಾಜಿ ಸೈನಿಕ | | | | | | | | | 0 |
| | | | ಪ್ರ–1 | | 3–ಬಿ | | | | ಕ ಮಾ ಅ | | | | | | | | 1 | 1 |
| | | | | | | | | | ಯೋ ನಿ ಅ | | | | | | | | 1 | 1 |
| | | | | | | | | | ಅಂ ವಿ | | | | | | | | | 0 |
| | | | | | | | | **10** | ಒಟ್ಟು | 1 | 1 | 0 | 1 | 0 | 1 | 1 | 5 | 10 |

*ವಿಷಯ:– ಉರ್ದು ಸಾಮಾನ್ಯ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | | | | | | ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | | ಅಂಗವಿಕಲರು | | | | | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ–1 | ಪ್ರವರ್ಗ–2(ಎ) | ಪ್ರವರ್ಗ–2(ಬಿ) | ಪ್ರವರ್ಗ–3(ಎ) | ಪ್ರವರ್ಗ–3(ಬಿ) | ಸಾಮಾನ್ಯ ಅರ್ಹತೆ | ಒಟ್ಟು |
| ಶಿಗ್ಗಾಂವ | ಪ ಜಾತಿ | | ಪ ಜಾತಿ | | 2–ಎ | | | 5 | ಇತರರು | 1 | | | 1 | | 1 | | 1 | 4 |
| | ಪ ಪಂ | | ಪ ಪಂ | | 2–ಬಿ | | | | ಗ್ರಾಮೀಣ | | | | | | | | | 0 |
| | | | ಸಾ ಅ | | 3–ಎ | | | | ಮಾಜಿ ಸೈನಿಕ | | | | | | | | | 0 |
| | | | ಪ್ರ–1 | | 3–ಬಿ | | | | ಕ ಮಾ ಅ | | | | | | | | | 0 |
| | | | | | | | | | ಯೋ ನಿ ಅ | | | | | | | | | 0 |
| | | | | | | | | | ಅಂ ವಿ | | | | | | | | 1 | 1 |
| | | | | | | | | **5** | ಒಟ್ಟು | 1 | 0 | 0 | 1 | 0 | 1 | 0 | 2 | 5 |

*ವಿಷಯ:– ಉರ್ದು ಸಾಮಾನ್ಯ*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | | | | | | ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | ಅಂಗವಿಕಲರು | | | | | | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ–1 | ಪ್ರವರ್ಗ–2(ಎ) | ಪ್ರವರ್ಗ–2(ಬಿ) | ಪ್ರವರ್ಗ–3(ಎ) | ಪ್ರವರ್ಗ–3(ಬಿ) | ಸಾಮಾನ್ಯ ಅರ್ಹತೆ | ಒಟ್ಟು |
| ಹಾವೇರಿ | ಪ ಜಾತಿ | | ಪ ಜಾತಿ | | 2–ಎ | | | 4 | ಇತರರು | | | 1 | 1 | | | | 1 | 3 |
| | ಪ ಪಂ | | ಪ ಪಂ | | 2–ಬಿ | | | | ಗ್ರಾಮೀಣ | | | | | | | | 1 | 1 |
| | | | ಸಾ ಅ | | 3–ಎ | | | | ಮಾಜಿ ಸೈನಿಕ | | | | | | | | | 0 |
| | | | ಪ್ರ–1 | | 3–ಬಿ | | | | ಕ ಮಾ ಅ | | | | | | | | | 0 |
| | | | | | | | | | ಯೋ ನಿ ಅ | | | | | | | | | 0 |
| | | | | | | | | | ಅಂ ವಿ | | | | | | | | | 0 |
| | | | | | | | | **4** | ಒಟ್ಟು | 0 | 0 | 1 | 1 | 0 | 0 | 0 | 2 | 4 |

*ವಿಷಯ:– ಉರ್ದು ಇಂಗ್ಲೀಷ (ಉರ್ದು ಮಾಧ್ಯಮ)*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | | | | | | ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | ಅಂಗವಿಕಲರು | | | | | | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ–1 | ಪ್ರವರ್ಗ–2(ಎ) | ಪ್ರವರ್ಗ–2(ಬಿ) | ಪ್ರವರ್ಗ–3(ಎ) | ಪ್ರವರ್ಗ–3(ಬಿ) | ಸಾಮಾನ್ಯ ಅರ್ಹತೆ | ಒಟ್ಟು |
| ಹಾನಗಲ್ಲ | ಪ ಜಾತಿ | | ಪ ಜಾತಿ | | 2–ಎ | | | 1 | ಇತರರು | | | | | | | | 1 | 1 |
| | ಪ ಪಂ | | ಪ ಪಂ | | 2–ಬಿ | | | | ಗ್ರಾಮೀಣ | | | | | | | | | 0 |
| | | | ಸಾ ಅ | | 3–ಎ | | | | ಮಾಜಿ ಸೈನಿಕ | | | | | | | | | 0 |
| | | | ಪ್ರ–1 | | 3–ಬಿ | | | | ಕ ಮಾ ಅ | | | | | | | | | 0 |
| | | | | | | | | | ಯೋ ನಿ ಅ | | | | | | | | | 0 |
| | | | | | | | | | ಅಂ ವಿ | | | | | | | | | 0 |
| | | | | | | | | **1** | ಒಟ್ಟು | 0 | 0 | 0 | 0 | 0 | 0 | 0 | 1 | 1 |

*ವಿಷಯ:– ಉರ್ದು ವಿಜ್ಞಾನ (ಉರ್ದು ಮಾಧ್ಯಮ)*

| ತಾಲ್ಲೂಕು | ಬ್ಯಾಕ್‌ಲಾಗ್ ಹುದ್ದೆಗಳು | | | | | | ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | ಅಂಗವಿಕಲರು | | | | | | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ–1 | ಪ್ರವರ್ಗ–2(ಎ) | ಪ್ರವರ್ಗ–2(ಬಿ) | ಪ್ರವರ್ಗ–3(ಎ) | ಪ್ರವರ್ಗ–3(ಬಿ) | ಸಾಮಾನ್ಯ ಅರ್ಹತೆ | ಒಟ್ಟು |
| ಹಾನಗಲ್ಲ | ಪ ಜಾತಿ | | ಪ ಜಾತಿ | | 2–ಎ | | | 2 | ಇತರರು | | | | | | | | 1 | 1 |
| | ಪ ಪಂ | | ಪ ಪಂ | | 2–ಬಿ | | | | ಗ್ರಾಮೀಣ | | | | | | | | | 0 |
| | | | ಸಾ ಅ | | 3–ಎ | | | | ಮಾಜಿ ಸೈನಿಕ | | | | | | | | | 0 |
| | | | ಪ್ರ–1 | | 3–ಬಿ | | | | ಕ ಮಾ ಅ | | | | | | | | | 0 |
| | | | | | | | | | ಯೋ ನಿ ಅ | | | | | | | | | 0 |
| | | | | | | | | | ಅಂ ವಿ | | | | 1 | | | | | 1 |
| | | | | | | | | **2** | ಒಟ್ಟು | 0 | 0 | 0 | 1 | 0 | 0 | 0 | 1 | 2 |

*ಉಪನಿರ್ದೇಶಕರು ಹಾಗೂ ಆಯ್ಕೆ ಪ್ರಾಧಿಕಾರಿಗಳು,*
*ಸಾ.ಶಿ.ಇಲಾಖೆ, ಹಾವೇರಿ*

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು